ಹೊಸ ಶಿಕ್ಷಣ ಮಾಲೆ

ಸಂಪಾದಕರು :

ಬಿ. ಎಸ್. ಹಂಚಿನಾಳ, ಬಿ. ಎ., ಬಿ. ಟಿ.

# ಶಿಕ್ಷಣವೂ ಕಲಿಸುವ ಕ್ರಮವೂ







ಆಯ್. ಸಿ. ತಂಬದ

ಎಮ್. ಜಿ. ಹಂದ್ರಾಳ

ಡಿ. ಎಸ್. ಕರ್ಕಿ

# ಹೊಸ ಶಿಕ್ಷಣ ಮಾಲೆಯ

## ಪ್ರಕಟನೆಗಳು

| | | |
|---|---|---|
| ೧ | ಶಿಕ್ಷಣವೂ ಕಲಿಸುವ ಕ್ರಮವೂ | |
| ೨ | ಐವರು ಶಿಕ್ಷಣ ಸುಧಾರಕರು | (ಅಚ್ಚಿನಲ್ಲಿವೆ) |
| ೩ | ಶೈಕ್ಷಣಿಕ ಮನಶ್ಶಾಸ್ತ್ರ | ,, |
| ೪ | ಶಾಲಾ ಸಂವಿಧಾನ | ,, |
| ೫ | ವಿಶಿಷ್ಟ ಪದ್ಧತಿಗಳು | ,, |
| ೬ | ಆಧುನಿಕ ಶೈಕ್ಷಣಿಕ ಸಮಸ್ಯೆಗಳು | ,, |

# ಶಿಕ್ಷಣವೂ ಕಲಿಸುವ ಕ್ರಮವೂ


ಲೇಖಕರು :

**ಆಯ್. ಸಿ. ತಂಬದ**, ಬಿ. ಎ., ಬಿ. ಟಿ.,
ಶಿಕ್ಷಕರು, ಕನ್ನಡ ಹೆಣ್ಣುಮಕ್ಕಳ ಟ್ರೇನಿಂಗ ಕಾಲೇಜ, ಧಾರವಾಡ

**ಎಮ್. ಜಿ. ಹಂದ್ರಾಳ**, ಬಿ. ಎ. (ಆನರ್ಸ), ಬಿ. ಟಿ., ಡಿ. ಪಿ. ಇಡಿ.,
ಶಿಕ್ಷಕರು, ಕನ್ನಡ ಹೆಣ್ಣುಮಕ್ಕಳ ಟ್ರೇನಿಂಗ ಕಾಲೇಜ, ಧಾರವಾಡ

**ಡಿ. ಎಸ್. ಕರ್ಕಿ**, ಎಮ್. ಎ., ಬಿ. ಟಿ.,
ಶಿಕ್ಷಕರು, ಕನ್ನಡ ಪ್ರಾಥಮಿಕ ಶಿಕ್ಷಕರ ಟ್ರೇನಿಂಗ ಕಾಲೇಜ, ಬೆಳಗಾವಿ



**೨೧ ಅಕ್ಟೋಬರ ೧೯೪೧** **ಬೆಲೆ : ೧೨ ಆಣೆ**

# ಬಿನ್ನಹ

ಕಳೆದ ೩೦-೪೦ ವರುಷಗಳಿಂದ ಶಿಕ್ಷಣ ಕ್ಷೇತ್ರದಲ್ಲಿ ಹಿಂದೆ ಯಾವ ಒಂದು ಅವಧಿಯಲ್ಲಿಯೂ ನಡೆಯದಷ್ಟು ಪ್ರಗತಿ ಚಟುವಟಿಕೆಗಳು ನಡೆಯುತ್ತಲಿವೆ. ಎಲ್ಲೆಡೆಯಿಂದಲೂ "ಹೊಸ ಶಿಕ್ಷಣ" ಎಂಬ ಕೂಗು ಕೇಳಬರುತ್ತಿದೆ. ಯುರೋಪ, ಅಮೇರಿಕಾ ಖಂಡಗಳಲ್ಲಂತೂ ಶಿಕ್ಷಣಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳ ಬಗ್ಗೆ ಪರಿಶ್ರಮಯುಕ್ತವೂ ಆಸಕ್ತಿಪರಿಪೂರ್ಣವೂ ಆದ ಅಭ್ಯಾಸವು ಸಾಗಿ ಅದರ ಪರಿಣಾಮವಾಗಿ ಮುತ್ತಿನಂತಹ ಶೈಕ್ಷಣಿಕ ತತ್ತ್ವಗಳು ರೂಪುಗೊಂಡಿವೆ; ಪರಿಣಾಮಕಾರಕವಾದ ಶಿಕ್ಷಣ ಪದ್ಧತಿಗಳು ಪ್ರಚಾರದಲ್ಲಿ ಬಂದಿವೆ; ಬರುತ್ತಲಿವೆ. ಯುರೋಪ, ಅಮೇರಿಕಾ ಖಂಡಗಳಲ್ಲಿ ಶಿಕ್ಷಣ ಶಾಸ್ತ್ರವನ್ನೂ ಕಲೆಯನ್ನೂ ಕೂಲಂಕಷವಾಗಿ ವಿವರಿಸುವ, ವಿವೇಚಿಸುವ, ವಿಮರ್ಶಿಸುವ ಸಾಹಿತ್ಯವು ವಿಪುಲವಾಗಿ ರಚಿತವಾಗಿದೆ; ಶಿಕ್ಷಣ ಪ್ರಪಂಚದಲ್ಲಿ ದುಡಿಯುವವರಿಗೆ ಆಶ್ರಯವನ್ನಿತ್ತಿದೆ. ಹೀಗೆ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಉದ್ಭವಿಸಿದ ಶಿಕ್ಷಣ ಸಾಹಿತ್ಯದ ಗಾಳಿಯು ನೆರೆ ರಾಷ್ಟ್ರಗಳಲ್ಲಿ ಬೀಸತೊಡಗಿ ಹಿಂದುಸ್ಥಾನದಲ್ಲಿಯೂ ತಕ್ಕಮಟ್ಟಿಗೆ ಸುಳಿಯುಲಾರಂಭಿಸಿದೆ. ಅದರ ಪರಿಣಾಮವಾಗಿ ಭಾರತದ ಕೆಲಕೆಲವು ಪ್ರಾಂತೀಯ ಭಾಷೆಗಳಲ್ಲಿ ಈಗಾಗಲೇ ಅಷ್ಟಿಷ್ಟು ಶೈಕ್ಷಣಿಕ ಸಾಹಿತ್ಯದ ಸೃಷ್ಟಿಯಾಗಿದೆ. ಆದರೆ ಶಿಕ್ಷಣ ಪ್ರಪಂಚಕ್ಕೆ ಸಂಬಂಧಿಸಿದ ಸಾಹಿತ್ಯವು ಕನ್ನಡದಲ್ಲಿ ಈ ವರೆಗೆ ನಿರ್ಮಾಣವಾದುದು ತೀರ ಕಡಿಮೆಯೆಂದೇ ಹೇಳಬೇಕು; ಹಾಗೆ ಹೇಳಿದರೆ ಎಲ್ಲರೂ ಒಪ್ಪಲೇಬೇಕು. ಮೈಸೂರು ಪ್ರಾಂತದಲ್ಲಿ ಪ್ರಕಟವಾದ "ಬೋಧನ ಕ್ರಮ", "ಉಪಾಧ್ಯಾಯರ ಕೈಪಿಡಿ", "ಶಾಲೆಗಳ ಶಿಕ್ಷಣ, ಸಂವಿಧಾನ ಮತ್ತು ತಿದ್ದುವಿಕೆ", "ನವೀನ ವಿದ್ಯಾಭ್ಯಾಸ", "ಶಿಕ್ಷಣ ತತ್ತ್ವ" ಮೊದಲಾದ ಗ್ರಂಥಗಳನ್ನೂ, ಉತ್ತರ ಕರ್ನಾಟಕದಲ್ಲಿ ಬೆಳಕು ಕಂಡ "ಶಿಕ್ಷಣ

ಮೀಮಾಂಸೆ"; "ಶಿಕ್ಷಣದ ಮೂಲತತ್ತ್ವಗಳು" ಮೊದಲಾದ ಒಂದೆ ರಡು ಗ್ರಂಥಗಳನ್ನೂ ಕೈ ಬೆರಳುಗಳ ಮೇಲೆ ಎಣಿಸಬಹುದಾಗಿದೆ.

ಕನ್ನಡಕ್ಕೆ ಇರುವ ಈ ಶೈಕ್ಷಣಿಕ ಸಾಹಿತ್ಯದ ಕೊರತೆಯನ್ನು ನೆನೆದು ಕೈಲಾದ ಮಟ್ಟಿಗೆ ಅದನ್ನು ತುಂಬಬೇಕೆಂದೆಣಿಸಿ **ಈ ಹೊಸ ಶಿಕ್ಷಣ ಮಾಲೆ**ಯನ್ನು ಹೊರಡಿಸಲಾಗಿದೆ. ಸದ್ಯಕ್ಕೆ ಈ ಶಿಕ್ಷಣ ಮಾಲೆ ಯಿಂದ ಆರು ಹೊತ್ತಿಗೆಗಳನ್ನು ಪ್ರಕಟಿಸಬೇಕೆಂಬ ಮನೀಷೆ. ಈ ಮಾಲೆ ಯನ್ನು ಸಿದ್ಧಗೊಳಿಸಲು ಶ್ರೀಯುತರುಗಳಾದ ಆಯ್. ಸಿ. ತಂಬದ, ಬಿ. ಎ., ಬಿ, ಟಿ., ಎಮ್. ಜಿ. ಹಂಪ್ಪಾಳ, ಬಿ. ಎ. (ಆನರ್ಸ), ಬಿ. ಟಿ., ಡಿ. ಪಿ. ಇಡಿ., ಡಿ. ಎಸ್. ಕರ್ಕಿ, ಎಮ್. ಎ., ಬಿ. ಟಿ., ಇವರು ಮುಂದೆ ಬಂದು ನೆರವಾದುದು ಸ್ತುತ್ಯವಾಗಿದೆ. ಇವರು ಈಗಾಗಲೇ ಪರಿಶ್ರಮಪಟ್ಟು ಈ ಮಾಲೆಗಾಗಿ ವಿಷಯ ಸಂಗ್ರಹವನ್ನು ಮಾಡಿ ಅಚ್ಚಿಗಾಗಿ ಕೈ ಬರೆಹದ ಪ್ರತಿಗಳನ್ನು ಸಿದ್ಧಗೊಳಿಸಿದ್ದಾರೆ. ಅಲ್ಪಾ ವಧಿಯಲ್ಲಿಯೇ ಇವು ಬೆಳಕನ್ನು ಕಾಣುವವೆಂದು ನಾವು ಆಶಿಸುತ್ತೇವೆ.

ಪ್ರಸ್ತುತ ಲೇಖಕರು ರಚಿಸಿರುವ ಪುಸ್ತಕಗಳಲ್ಲಿ ಇದು ಮೊದಲ ನೆಯದು. ಅವರ ಈ ಗ್ರಂಥವು ಕನ್ನಡ ಶಿಕ್ಷಕರಿಗೆ ಮತ್ತು ಶಿಕ್ಷಣ ಪ್ರೇಮಿಗಳಿಗೆ ನೆರವಾದರೆ ಅವರ ಪ್ರಯತ್ನವು ಸಫಲವಾದಂತೆಯೇ ಸರಿ. ಕನ್ನಡದಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದ ಗ್ರಂಥಗಳನ್ನು ರಚಿಸಿದ ಮತ್ತು ರಚಿಸುವವರ ಸಾಹಸವು ಪ್ರೋತ್ಸಾಹಾರ್ಹವಾದುದು. ಈ ಬಗೆಯ ಎಲ್ಲ ಶೈಕ್ಷಣಿಕ ಚಟುವಟಿಕೆಗಳಿಗೆ ಸಾಕಷ್ಟು ಉತ್ತೇಜನ ದೊರೆತರೆ ನಮ್ಮ ನಾಡಿನ ಶಿಕ್ಷಣವು ಸರ್ವಪ್ರಕಾರದಿಂದಲೂ ಉತ್ತಮಪಡುವದರಲ್ಲಿ ಸಂದೇಹವಿಲ್ಲ; ಹಾಗೆ ಉತ್ತಮಪಡಲಿ ಎಂದು ನಾವು ಹಾರೈಸುತ್ತೇವೆ.

ಗಂಡು ಮಕ್ಕಳ ಟ್ರೇನಿಂಗ ಕಾಲೇಜ, ಧಾರವಾಡ, ಈ ಸಂಸ್ಥೆಯ ಪ್ರಿನ್ಸಿಪಾಲರಾದ ಶ್ರೀ. ಎಚ್. ಎಸ್. ತೊರಗಲ್, ಎಮ್. ಎ., ಎಸ್. ಟಿ. ಸಿ. ಡಿ., ಇವರು ಪರಿಶ್ರಮವಹಿಸಿ ವಿಚಾರಪೂರ್ಣ ಮುನ್ನುಡಿ ಯನ್ನು ಬರೆದು ಕೊಟ್ಟದ್ದಕ್ಕಾಗಿ ಅವರಿಗೆ ನಮ್ಮ ವಂದನೆಗಳು.

ಈ ಪುಸ್ತಕದ ಕೈ ಬರೆಹದ ಪ್ರತಿಯನ್ನು ಶ್ರೀ. ವ್ಹಿ. ಆರ್. ಕೊಪ್ಪಳ, ಎಮ್, ಎ., ಬಿ. ಟಿ., ಇವರು ಓದಿ ತಕ್ಕ ಸಲಹೆ ಸೂಚನೆಗಳ

ನ್ನಿತ್ತರು. ನಮ್ಮ ಪರಮ ಮಿತ್ರರಾದ ಶ್ರೀ. ಬಿ. ಜಿ. ಹಳಕಟ್ಟಿಯವರು ಈ ಕೆಲಸದಲ್ಲಿ ಆಸ್ಥೆವಹಿಸಿ ಮೇಲಿಂದ ಮೇಲೆ ಪ್ರೋತ್ಸಾಹಿಸಿದರು. ಅವರು ಹೀಗೆ ಪ್ರೋತ್ಸಾಹಿಸದಿದ್ದರೆ ಈ ಗ್ರಂಥವು ಇಷ್ಟು ಬೇಗನೆ ಬೆಳಕನ್ನು ಕಾಣುತ್ತಿರಲಿಲ್ಲ. ಇದಕ್ಕಾಗಿ ಇವರೀರ್ವರಿಗೂ ನಾವು ಕೃತಜ್ಞರಾಗಿದ್ದೇವೆ.

ಶ್ರೀ. ತೋಂಟದಾರ್ಯ ಪ್ರೆಸ್ಸಿನ ವ್ಯವಸ್ಥಾಪಕರಾದ ಶ್ರೀ. ಎಸ್. ಬಿ. ಹರಿಹರ ಮತ್ತು ಅವರ ಮೇಲ್ವಿಚಾರಕರಾದ ಶ್ರೀ. ಎಮ್. ಜಿ. ವಿರೂಪಾಕ್ಷನ್ ಇವರೀರ್ವರು ಈ ಗ್ರಂಥದ ಅಚ್ಚಿನ ಬಗ್ಗೆ ಅನೇಕ ಸಲಹೆಗಳನ್ನು ಕೊಟ್ಟು ಅಲ್ಪಾವಧಿಯಲ್ಲಿಯೇ ಇದನ್ನು ಅಂದವಾಗಿ ಅಚ್ಚು ಹಾಕಿಕೊಟ್ಟದ್ದಕ್ಕಾಗಿ ಅವರಿಗೆ ನಾವು ಉಪಕೃತರಾಗಿದ್ದೇವೆ.

ಬೆಳಗಾವಿ

ಕಾರ್ತಿಕ ಶುದ್ಧ ೧ — **ಬಿ. ಎಸ್. ಹಂಚಿನಾಳ**

(ತಾ|| ೨೧-೧೦-೧೯೬೧)

# ನಿವೇದನ

ಕರ್ನಾಟಕದ ಈ ಭಾಗದಲ್ಲಿ ಹೊಸ ದೃಷ್ಟಿಯಿಂದ ಬರೆದ ಶೈಕ್ಷಣಿಕ ಗ್ರಂಥಗಳು ಇಲ್ಲವಾದುದರಿಂದ ಕನ್ನಡ ಟ್ರೇನಿಂಗ ಕಾಲೇಜುಗಳಲ್ಲಿ ಶಿಕ್ಷಣ ಹೊಂದುತ್ತಲಿರುವ ಶಿಕ್ಷಕ-ವಿದ್ಯಾರ್ಥಿಗಳಿಗೆ ಅನೇಕ ತೊಂದರೆಗಳುಂಟಾದುದನ್ನು ನೆನೆದು ಅವುಗಳನ್ನು ಸ್ವಲ್ಪಮಟ್ಟಿಗಾದರೂ ಹೋಗಲಾಡಿಸಲು ಕಳೆದ ೧-೨ ವರ್ಷಗಳಿಂದ ನಾವು ವಿಷಯವನ್ನು ಸಂಗ್ರಹಿಸುತ್ತಲೇ ಇದ್ದೆವು. ಅಷ್ಟರಲ್ಲಿ ಕನ್ನಡ ಶೈಕ್ಷಣಿಕ ಸಾಹಿತ್ಯದ ಕೊರತೆಯನ್ನು ತಕ್ಕ ಮಟ್ಟಿಗಾದರೂ ಪೂರೈಸಬೇಕೆಂಬ ಸದುದ್ದೇಶದಿಂದ ಪ್ರೇರಿತರಾದ ಶ್ರೀ. ಬಿ. ಎಸ್. ಹಂಚಿನಾಳ ಇವರು ನಮ್ಮೊಡನೆ ವಿಚಾರ ವಿನಿಮಯಮಾಡಿ "ಹೊಸ ಶಿಕ್ಷಣ ಮಾಲೆ" ಎಂಬ ಹೆಸರಿನ ಶಿಕ್ಷಣ ಮಾಲೆಯೊಂದನ್ನು ಹೊರಡಿಸುವ ಯೋಜನೆಯನ್ನು ಸಿದ್ಧಗೊಳಿಸಿದರು ಮತ್ತು ಆ ಮಾಲೆಯ ಗ್ರಂಥಗಳನ್ನೆಲ್ಲ ಬರೆಯುವ ಹೊಣೆಯನ್ನು ನಮ್ಮ ಮೇಲೆ ಹೊರಿಸಿದರು. ಅವರ ಸಲಹೆ ಸೂಚನೆಗಳ ಮೇರೆಗೆ ನಾವು ಸಂಗ್ರಹಿಸಿಟ್ಟ ವಿಷಯಗಳನ್ನೆಲ್ಲ ಅಲ್ಪಾವಧಿಯಲ್ಲಿಯೇ ಅಳವಡಿಸಿ ಆರು ಹೊತ್ತಿಗೆಗಳನ್ನು ತಯಾರಿಸಿದೆವು.

ಶಿಕ್ಷಣಕ್ಷೇತ್ರದ ವ್ಯಾಪ್ತಿಯ ಕಲ್ಪನೆಯನ್ನು ಪ್ರಾಥಮಿಕ ಶಿಕ್ಷಕರಿಗೆ ಮಾಡಿಕೊಡುವದಕ್ಕಾಗಿ ಟ್ರೇನಿಂಗ ಕಾಲೇಜಿನ ಅಭ್ಯಾಸ ಪತ್ರಿಕೆಯಲ್ಲಿ ಸೇರಿದ ಹಾಗು ಸೇರಬಹುದಾದ ವಿಷಯಗಳನ್ನೆಲ್ಲ ನಾವು ಈ ಮಾಲೆಯಲ್ಲಿ ಸಮಾವೇಶ ಮಾಡಿದ್ದೇವೆ; ಅವುಗಳನ್ನು ವಿವೇಚಿಸುವಾಗ ಸಾಮಾನ್ಯವಾಗಿ ಟ್ರೇನಿಂಗ ಕಾಲೇಜಿನ ಶಿಕ್ಷಕ-ವಿದ್ಯಾರ್ಥಿಗಳ ಬೇಡಿಕೆಗಳನ್ನೇ ಲಕ್ಷದಲ್ಲಿಟ್ಟುಕೊಂಡಿದ್ದೇವೆ. ಸುಲಭ ಅಥವಾ ಮಹತ್ತ್ವವಿಲ್ಲದ ವಿಷಯಗಳನ್ನು ಸಂಕ್ಷೇಪವಾಗಿಯೂ, ಕಠಿಣ ಇಲ್ಲವೆ ಮಹ

ತ್ತ್ವದ ವಿಷಯಗಳನ್ನು ಸಾಕಷ್ಟು ವಿಸ್ತಾರವಾಗಿಯೂ ವಿವರಿಸಿದ್ದೇವೆ. ಕೆಲವು ವಿಷಯಗಳನ್ನು ಇನ್ನೂ ವಿಸ್ತಾರಗೊಳಿಸಬಹುದಾಗಿತ್ತು. ಆದರೆ ಸ್ಥಳದ ಮತ್ತು ಕಾಲದ ಅಭಾವದಿಂದ ಹಾಗೆ ಮಾಡಲಾಗಲಿಲ್ಲ.

ಇದು ನಮ್ಮ ಪ್ರಥಮ ಪ್ರಯತ್ನವಾದುದರಿಂದ ಅಲ್ಲಲ್ಲಿ ಕೆಲವು ಕುಂದು ಕೊರತೆಗಳು ಕಂಡುಬರಬಹುದು. ಶಿಕ್ಷಣ ತಜ್ಞರ ಅನುಭವದ ಬೆಳಕು ಮತ್ತು ವಾಚಕರ ಸಲಹೆ ಸೂಚನೆಗಳು ನಮ್ಮ ನೆರವಿಗೆ ಬಂದರೆ ನಾವು ಅವುಗಳನ್ನು ಮುಂದಿನ ಆವೃತ್ತಿಯಲ್ಲಿ ತುಂಬಿಕೊಳ್ಳಲು ಪ್ರಯತ್ನಿಸುತ್ತೇವೆ. ಹಾಗೆ ನೆರವಾಗಲೆಂದು ನಾವು ಅಪೇಕ್ಷಿಸುತ್ತೇವೆ; ಅವರನ್ನು ಪ್ರಾರ್ಥಿಸುತ್ತೇವೆ.

ಶಿಕ್ಷಣ ವಿಷಯದ ಬಗ್ಗೆ ಸರಿಯಾದ ಮತ್ತು ಸಮನಾದ ಪಾರಿಭಾಷಿಕ ಶಬ್ದಗಳು ಕನ್ನಡದಲ್ಲಿ ಇನ್ನೂ ರೂಪುಗೊಂಡಿಲ್ಲ. ಈ ಮಾಲೆಯ ರಚನೆಯ ಕಾಲಕ್ಕೆ ಇಂಥ ಅನೇಕ ಶಬ್ದಗಳನ್ನು ನಾವು ರಚಿಸಿಕೊಂಡು ಈ ಕೊರತೆಯನ್ನು ತುಂಬಿಕೊಳ್ಳಬೇಕಾಯಿತು. ಹೀಗೆ ನಾವು ರಚಿಸಿಕೊಂಡ ಶಬ್ದಗಳೇ ಸರಿಯಾದುವೆಂದು ಹೇಳಬಯಸಲಾರೆವು. ಆದರೆ ಈ ಬಗ್ಗೆ ಹೆಚ್ಚು ಜಾಗ್ರತೆಪಟ್ಟುಕೊಂಡಿರುವೆವೆಂಬುದನ್ನು ಮಾತ್ರ ಹೇಳಬಲ್ಲೆವು.

ಈ ಗ್ರಂಥದ ರಚನೆಗೆ ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷ ರೀತಿಯಿಂದ ನೆರವಾದ ವಿವಿಧ ಗ್ರಂಥಗಳ ಹಾಗು ಶಿಕ್ಷಣತಜ್ಞರ ಸಹಾಯವನ್ನು ನಾವು ಮರೆಯುವಂತಿಲ್ಲ. ಇದಕ್ಕಾಗಿ ನಾವು ಆ ಎಲ್ಲ ಗ್ರಂಥಕಾರರಿಗೂ ಮತ್ತು ಶಿಕ್ಷಣತಜ್ಞರಿಗೂ ಉಪಕೃತರಾಗಿದ್ದೇವೆ.

**ಆಯ್. ಸಿ. ತಂಬದ**
**ಎಮ್. ಜಿ. ಹಂದ್ರಾಳ**
**ಡಿ. ಎಸ್. ಕರ್ಕಿ**

# ಮುನ್ನುಡಿ

ನಮ್ಮ ಸಹೋದ್ಯೋಗಿಗಳೂ ಬೆಳಗಾವಿಯ ಕನ್ನಡ ಟ್ರೇನಿಂಗ ಕಾಲೇಜದ ಪ್ರಿನ್ಸಿಪಾಲರೂ ಆದ ಶ್ರೀ ಬಿ. ಎಸ್. ಹಂಚಿನಾಳ ಅವರು ಈ ಚಿಕ್ಕ ಪುಸ್ತಕಕ್ಕೊಂದು ಮುನ್ನುಡಿಯನ್ನು ಬರೆಯಲು ಕೇಳಿದರು. ಕನ್ನಡ ಸಾಹಿತ್ಯದಲ್ಲಿ ಈ ವಿಷಯದ ಪುಸ್ತಕಗಳ ಕೊರತೆಯನ್ನು ಅನುಭವಿಸುತ್ತಿರುವ ಶಿಕ್ಷಕರನ್ನೂ ಟ್ರೇನಿಂಗ ಕಾಲೇಜಗಳ ಶಿಕ್ಷಕ-ವಿದ್ಯಾರ್ಥಿಗಳನ್ನೂ ನೆನೆಸಿಕೊಂಡರೆ ಇಂತಹ ಶೈಕ್ಷಣಿಕ ಪುಸ್ತಕಗಳ ಆವಶ್ಯಕತೆಯು ಎಷ್ಟೆಂಬುದು ತಾನೇ ಹೊಳೆಯುವದು. ಮತ್ತು ಈ ವಿಷಯದಲ್ಲಿ ಟ್ರೇನಿಂಗ ಕಾಲೇಜದಲ್ಲಿ ಕೆಲಸ ಮಾಡುತ್ತಿರುವ ಶಿಕ್ಷಕ ವರ್ಗದ ಹೊಣೆಗಾರಿಕೆಯೂ ಕೂಡ ಮನವರಿಕೆಯಾಗುವದು. ಆದುದರಿಂದ ಈ "ಹೊಸ ಶಿಕ್ಷಣ ಮಾಲೆ"ಯ ಸಂಪಾದಕರಾದ ಶ್ರೀ. ಹಂಚಿನಾಳರವರ ಮತ್ತು ಈ ಪುಸ್ತಕದ ಲೇಖಕರ ಸ್ತುತ್ಯಪ್ರಯತ್ನಕ್ಕೆ ಮನಃಪೂರ್ವಕವಾಗಿ ನೆರವಾಗಲು ಬಯಸಿ ಈ ಚಿಕ್ಕ ಮುನ್ನುಡಿಯನ್ನು ಬರೆಯಲು ಒಪ್ಪಿಕೊಳ್ಳಬೇಕಾಯಿತು.

"ಹೊಸಕಾಲವೊದಗಿ ಬರೆ ಬೇಡುವದು ಹೊಸ ಜನರ ಹೊಸ ಸಾಧನಂಗಳನು" ಎಂಬುದು ಇಂದಿನ ಈ ನವಯುಗದ ಒಂದು ಮುಖ್ಯ ಧರ್ಮ. ಅದಕ್ಕನುಗುಣವಾಗಿಯೇ ಶಿಕ್ಷಣ ಕ್ಷೇತ್ರದಲ್ಲಿಯೂ ಹೊಸ ಜನರೂ ಹೊಸ ಸಾಧನಗಳೂ ಹುಟ್ಟಹತ್ತಿವೆ. ಹಳೆಯ ಕಾಲಕ್ಕೂ ಹೊಸ ಕಾಲಕ್ಕೂ ಸಮನ್ವಯವಾಗುವಂತಹ ಎಷ್ಟೋ ಮಾತುಗಳು ಶಿಕ್ಷಣ ಪ್ರಪಂಚದಲ್ಲಿದ್ದರೂ ಚಿಕ್ಕಮಕ್ಕಳು ಅವರ ಮನಸ್ಸಂಸ್ಕಾರ ಇವು

ಗಳಿಗೇ ಪ್ರಾಧಾನ್ಯವಿರಬೇಕಲ್ಲದೆ ಶಿಕ್ಷಕರು ಕಲಿಸುವ ವಿಷಯಗಳಿಗಾಗಲಿ ಅವನ್ನು ಕಲಿಸುವ ಕ್ರಮಗಳಿಗಾಗಲಿ ಹೆಚ್ಚು ಪ್ರಾಮುಖ್ಯತೆ ಇರಲಾರದೆಂಬ ವಿಷಯದಲ್ಲಿ ಮಾತ್ರ ಹೊಸ ಕಾಲವು ಹಳೆಯ ಕಾಲದಿಂದ ತೀರ ಭಿನ್ನಾಭಿಪ್ರಾಯವುಳ್ಳದ್ದಾಗಿದೆ. ಆದುದರಿಂದಲೇ ಈ ಹೊಸ ಕಾಲಕ್ಕೆ ಶಿಕ್ಷಣ ಪ್ರಪಂಚದಲ್ಲಿ "ಮಗುವಿನ ಯುಗ" ಎಂದು ಹೆಸರು ಬಂದಿದೆ. ಫ್ರಾನ್ಸ ದೇಶದ ಶಿಕ್ಷಣ ಶಾಸ್ತ್ರಜ್ಞನಾದ **ರೂಸೊ**ನೂ ಸ್ವಿತ್ಸರ್ಲಂಡದ ಮನಃಶಾಸ್ತ್ರವೇತ್ತನಾದ **ಪೆಸ್ಟಾಲೋಝಿ**ಯೂ ಈ ಹೊಸ ಮನ್ವಂತರದ ಮನುಗಳು. ಮಾಂಟೆಸೂರಿ, ಬಾಲೋದ್ಯಾನ, ಡಾಲ್ಟನ್ ಕ್ರಮ, ಗೇರಿ ವ್ಯವಸ್ಥೆ ಮೊದಲಾದ ಎಲ್ಲ ನೂತನ ಶಿಕ್ಷಣ ಪದ್ಧತಿಗಳು ಈ ಮಗುವಿನ ಯುಗವೆಂಬ ಒಂದೇ ಒಂದು ಸೂತ್ರದ ಭಾಷ್ಯಗಳೆನಿಸಿಕೊಂಡಿವೆ. ಮಗುವಿನ ವ್ಯಕ್ತಿತ್ವ, ಅಭಿರುಚಿ, ಒಲವು ಇವನ್ನು ಅನುಲಕ್ಷಿಸಿಯೇ ಶಿಕ್ಷಣವು ಸಾಗಬೇಕೆಂದು ಎಲ್ಲ ಆಧುನಿಕ ಶಿಕ್ಷಣ ಶಾಸ್ತ್ರಜ್ಞರು ಒಮ್ಮತದಿಂದ ಸಾರಿ ಸಾರಿ ಹೇಳುತ್ತಿದ್ದಾರೆ. ಅತ ಏವ ಸದ್ಯದ ಶೈಕ್ಷಣಿಕ ಸಾಹಿತ್ಯವು ಕೂಡ ಇದಕ್ಕನುಗುಣವಾಗಿಯೇ ಹುಟ್ಟಿ ಬೆಳೆಯುತ್ತಲಿದೆ. ಪರದೇಶಗಳಲ್ಲಿ ಈ ಮಾತು ಕೃತಿಯಲ್ಲಿ ಒಡೆದು ಮೂಡಿ ಬಹುಕಾಲವಾಗಿ ಹೋಗಿದ್ದರೂ ನಮ್ಮ ದೇಶ ಭಾಷೆಗಳಲ್ಲಿ ಈ ವಿಷಯಗಳ ಪುಸ್ತಕಗಳೇ ಹೆಚ್ಚಾಗಿ ಹುಟ್ಟಿಲ್ಲ. ನಮ್ಮ ಪ್ರಾಥಮಿಕ ಶಾಲೆಯ ಶಿಕ್ಷಕರಿಗೆ ಶಿಕ್ಷಣ ಶಾಸ್ತ್ರದ ಈ ದೃಷ್ಟಿಯಿಂದ ಎಷ್ಟು ಆಳವಾದ ಅಭ್ಯಾಸವಾಗಬೇಕೋ ಅಷ್ಟು ಆಗಲು ಅನುವಾಗಿಲ್ಲವೆಂದು ಧಾರಾಳವಾಗಿ ಹೇಳಬಹುದು. ಹೀಗಿರುವದರಿಂದ ನಮ್ಮ ಸಹೋದ್ಯೋಗಿಗಳು ಹೊರಡಿಸಲಿರುವ ಪುಸ್ತಕಮಾಲೆಯು ಈ ಕೊರತೆಗಳನ್ನು ಹೋಗಲಾಡಿಸಲು ತಕ್ಕಮಟ್ಟಿಗೆ ನೆರವಾಗುವದೆಂದು ಆಶಿಸುತ್ತೇನೆ.

ವಿಷಯಗಳ ಕ್ರಮಬದ್ಧವಾದ ಯೋಜನೆ, ಅದಕ್ಕನುಗುಣವಾದ ಭಾಷೆ, ಆಧುನಿಕ ಕಾಲಕ್ಕೊಪ್ಪುವ ಬಾಹ್ಯಾಂಗ ಇವುಗಳಿಂದ ಈ ಮಾಲೆಯ ಪುಸ್ತಕಗಳು ಜನಪ್ರಿಯವೂ ಅಷ್ಟೇ ಪ್ರಯೋಜನಕಾರಿಯೂ ಆಗಬೇಕೆಂದು ತುಂಬಾ ಕೋರುವೆವು.

ಶ್ರೀಯುತ ಹಂಚಿನಾಳರ ಮತ್ತು ಅವರ ಸಹೋದ್ಯೋಗಿಗಳ ಕಾರ್ಯವು ತುಂಬ ಯಶಸ್ವಿಯಾಗಿ ಸಾಗಲೆಂದು ಮತ್ತೊಮ್ಮೆ ಹೇಳಿ ಈ ಚಿಕ್ಕ ಮುನ್ನುಡಿಯನ್ನು ಮುಗಿಸುವೆವು.

Training College for Men<br>Dharwar<br>9th October, 1941

H. S. Torgal,<br>Principal

# ಪರಿವಿಡಿ

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೮ | ೧ | ವಿಕಾಶ | ವಿಕಾಸ |
| ೨೨ | ೧೧ | ವಹತ್ತ್ವದಿದ್ದರೂ | ಮಹತ್ತ್ವವಿದ್ದರೂ |
| ೩೬ | ೫ | ವಿಷಯವಿಜ್ಞಾನ | ವಿಷಯಜ್ಞಾನ |
| ೫೩ | ೨೧ | ವಿಷಯಾಂಗಗಳನು | ವಿಷಯಾಂಗಗಳನ್ನು |
| ೬೦ | ೯ | ಶೋಧಕನ ಪದ್ಧತಿ | ಶೋಧಕ ಪದ್ಧತಿ |
| ೬೪ | ೭ | ಉಪೇಶಕಥನ | ಉದ್ದೇಶಕಥನ |
| ೬೭ | ೪ | ಅವನ್ನು | ಅವುಗಳನ್ನು |
| ೬೮ | ೧೦ | ತಮ್ಮ ವಾಕ್ಯದಲ್ಲಿ | (ಬಿಟ್ಟು ಓದಿರಿ) |
| ೭೪ | ೩ | ೬,೨ ಇವುಗಳ | ೬.೩ ಇವುಗಳ |
| ೯೦ | ೧೧ | ವಿಕಾಸ | ವಿಕಾಸದ |

ಭಾಗ ೧

# ಶಿಕ್ಷಣದ ಸ್ವರೂಪ

## ೧. ಹೊಸ ಶಿಕ್ಷಣ

ಜಗತ್ತಿನ ಪರಿಸ್ಥಿತಿಯು ಯಾವಾಗಲೂ ಒಂದೇ ಸಮನಾಗಿರದೆ ಕಾಲಕಾಲಕ್ಕೆ ಬದಲಾಗುತ್ತ ಹೋಗುತ್ತದೆ. ಆಗಾಗ್ಗೆ ಶಾಸ್ತ್ರೀಯ ಶೋಧಗಳಾಗಿ ಪ್ರಕೃತಿ ವಿಷಯಕ ಜ್ಞಾನವು ಬೆಳೆಯುತ್ತ ಹೋಗುವದು; ಮಹಾತ್ಮರು ಜನಿಸಿ ಜೀವನ ಸಾರ್ಥಕ್ಯದ ಹೊಸ ಹೊಸ ಮಾರ್ಗಗಳನ್ನು ಕಂಡು ಹಿಡಿಯುವರು; ಹೊಸ ತತ್ತ್ವಗಳನ್ನು ಬೋಧಿಸುವರು; ಹೊಸ ಸಿದ್ಧಾಂತಗಳನ್ನು ಬೆಳಕಿಗೆ ತರುವರು. ಜನತೆಯಲ್ಲಿ ಹೊಸ ವಿಚಾರಗಳು ತಲೆದೋರಿ ಸಾಮಾಜಿಕ ಜೀವನವು ಬದಲಾಗುತ್ತ ಹೋಗುವದು.

ಪರಿಸ್ಥಿತಿಯು ಬದಲಾಗುತ್ತ ನಡೆದಂತೆ ಶಿಕ್ಷಣವೂ ಬದಲಾಗುವದು. ಕಾಲಕಾಲಕ್ಕೆ ಶಿಕ್ಷಣದ ಧ್ಯೇಯ-ಕ್ರಮ-ಪದ್ಧತಿಗಳು ಹೇಗೆ ಬದಲಾಗುತ್ತ ಬಂದಿರುವವೆಂಬುದನ್ನು ಶಿಕ್ಷಣದ ಇತಿಹಾಸದ ಮೂಲಕ ನಾವು ತಿಳಿದು ಕೊಳ್ಳಬಹುದು. ಆದರೆ ಹೊಸದೆಂದು ಕರೆಯಿಸಿಕೊಳ್ಳುವ ಶಿಕ್ಷಣದ ಸಾಮಾನ್ಯ ವೈಶಿಷ್ಟ್ಯಗಳನ್ನು ಮಾತ್ರ ಸಂಕ್ಷೇಪವಾಗಿ ಇಲ್ಲಿ ಹೇಳಿದೆ.

ಈಗ ಹೊಸದೆಂದು ಕರೆಯಲ್ಪಡುವ ಶಿಕ್ಷಣವು ನಿಜವಾಗಿಯೂ ಅಷ್ಟು ಹೊಸದಲ್ಲ. **ರೂಸೋ**ನಿಗಿಂತ ಮೊದಲು ಎಷ್ಟೋ ವರ್ಷಗಳಿಂದ ಜನರಿಗೆ ಅದರ ಸಾಮಾನ್ಯ ಕಲ್ಪನೆಯಾಗಿತ್ತು. **ರೂಸೋ**ನಿಗಿಂತ ಹಿಂದಿನವರಾದ **ಕೊಮೆನಿಯಸ್, ಲಾಕ್** ಮೊದಲಾದ ಶಿಕ್ಷಣ ಸುಧಾರಕರ ಗ್ರಂಥಗಳನ್ನು ಚೆನ್ನಾಗಿ ಪರಿಶೀಲಿಸಿ ನೋಡಿದರೆ ಈ ಮಾತಿನ ಸತ್ಯತೆಯು ನಿದರ್ಶನಕ್ಕೆ ಬರುತ್ತದೆ. ಆದರೆ ತನ್ನ ಕಾಲದ ವರೆಗೆ ನಡೆದುಬಂದ ಶಿಕ್ಷಣಕ್ರಮದ ದೋಷಗಳನ್ನು ಬಲವಾಗಿ ಖಂಡಿಸಿ ಹೊಸ ಶಿಕ್ಷಣದ ತತ್ತ್ವಗಳನ್ನು ಜನರ ಮನಸ್ಸಿನಲ್ಲಿ ನಾಟುವಂತೆ ಸಾರಿಹೇಳಿ ಶಿಕ್ಷಣ ಪ್ರಪಂಚದಲ್ಲಿ ಮೊದಲು ಕ್ರಾಂತಿಯನ್ನೆಬ್ಬಿಸಿದವನು **ರೂಸೋ**. ಅವನ ತರುವಾಯ **ಪೆಸ್ಟಲಾಝಿ, ಹರ್ಬಾರ್ಟ, ಫ್ರೊಬೆಲ್, ಮಾಂಟೆಸರಿ** ಮೊದಲಾದ ಶಿಕ್ಷಣ ಸುಧಾರಕರು ಅನೇಕ ಶೈಕ್ಷಣಿಕ ಪ್ರಯೋಗಗಳನ್ನು ಕೈಕೊಂಡು ಹೊಸ ಹೊಸ ಶಿಕ್ಷಣ ಕ್ರಮಗಳನ್ನು ಕಂಡುಹಿಡಿದರು; ಹಾಗು **ರೂಸೋ** ಪ್ರಾರಂಭಿಸಿದ ಕಾರ್ಯವನ್ನು ಬಹಳವಾಗಿ ಮುಂದುವರಿಸಿದರು. ಈಗಲೂ ಸಹ ಇಂಗ್ಲಂಡ, ಅಮೇರಿಕಾ, ಮುಂತಾದ ಮುಂದುವರಿದ ಎಲ್ಲ ರಾಷ್ಟ್ರಗಳಲ್ಲಿ ಹೊಸ ಶೈಕ್ಷಣಿಕ ಪ್ರಯೋಗಗಳು ನಡೆಯುತ್ತಲಿವೆ.

ಹೊಸ ಶಿಕ್ಷಣದ ಮೂಲ ತತ್ತ್ವವು ಯಾವುದು? ಒಂದೇ ಮಾತಿನಲ್ಲಿ ಹೇಳುವದಾದರೆ ಅದು ಹೀಗೆ: **ಶಿಕ್ಷಣ ಪ್ರಪಂಚದಲ್ಲಿ ಬಾಲಕನಿಗೇ ಪ್ರಾಮುಖ್ಯ ಹೆಚ್ಚು. ಮಗುವು ಎಲ್ಲ ಶಿಕ್ಷಣ ಕಾರ್ಯದ ಕೇಂದ್ರವು.** ಈ ತತ್ತ್ವವು ಬಹಳ ಸರಳವಿದೆ. ಆದರೆ ಇದರ ಮಹತ್ತ್ವವು ಜನರಿಗೆ ಚನ್ನಾಗಿ ಅರಿಕೆಯಾಗಬೇಕಾದರೆ ಎಷ್ಟೋ ಶತಮಾನಗಳು ಬೇಕಾದವು.

ಅದು ಸಂಪೂರ್ಣವಾಗಿ ಇನ್ನೂ ಆಚರಣೆಯಲ್ಲಿ ಬಂದಿಲ್ಲ; ಬರಬೇಕಾದರೆ ಇನ್ನೂ ಎಷ್ಟೋ ವರ್ಷಗಳು ಹಿಡಿಯಬಹುದು.

ಹಳೆಯ ಶಿಕ್ಷಣದಲ್ಲಿ ಬಾಲಕನಿಗಿಂತ ಅಭ್ಯಾಸ ವಿಷಯಕ್ಕೆ ಹೆಚ್ಚು ಪ್ರಾಮುಖ್ಯ ದೊರಕಿತ್ತು. ಬಾಲಕನು ಒಬ್ಬ ವ್ಯಕ್ತಿಯೆಂದೂ ಮತ್ತು ಅವನ ವ್ಯಕ್ತಿತ್ವವು ಗೌರವಾರ್ಹವೆಂದೂ ಹಿಂದಿನ ಶಿಕ್ಷಕರು ತಿಳಿದಿರಲಿಲ್ಲ. ಅವನ ವ್ಯಕ್ತಿತ್ವವನ್ನು ಮೂಲೆಗೊತ್ತಿ ತಮಗೆ ಬೇಕಾದ ವಿಷಯಗಳನ್ನು ಅವರು ಬೋಧಿಸುತ್ತಿದ್ದರು. ಮಕ್ಕಳ ಅಭಿರುಚಿ, ಆಸಕ್ತಿಗಳ ಕಡೆಗೆ ಲಕ್ಷ್ಯಕೊಟ್ಟಿರಲಿಲ್ಲ. ಬಾಲಕರಿಗೆ ಯಾವ ಸ್ವಾತಂತ್ರ್ಯವೂ ಇದ್ದಿರಲಿಲ್ಲ. ಮಕ್ಕಳು ಅಭ್ಯಾಸ ವಿಷಯುಗಳನ್ನು ಕಲಿಯುವ, ಹಾಗು ಅವರಿಗೆ ಕಲಿಸುವ, ಕ್ರಮಕ್ಕೆ ಸಾಕಷ್ಟು ಗಮನವನ್ನು ಕೊಟ್ಟಿರಲಿಲ್ಲ. "ಬಾಲಕನ ಮನಸ್ಸು ಒಂದು ಬರಿದಾದ ಪಾತ್ರೆ, ಶಿಕ್ಷಕರು ಬಾಹ್ಯವಿಷಯುಗಳಿಂದ ಈ ಪಾತ್ರೆಯನ್ನು ತುಂಬಬೇಕು" ಎಂಬ ಗ್ರಹಿಕೆಯು ಎಲ್ಲ ಕಡೆಯಲ್ಲಿಯೂ ಇದ್ದಿತು. ಒಟ್ಟಾರೆ, ಹಳೆಯ ಶಿಕ್ಷಣವು ವಿಷಯ ಪ್ರಧಾನವಾಗಿದ್ದಿತು. ಈಗ ಇದೆಲ್ಲ ಬದಲಾಗುತ್ತ ನಡೆದಿದೆ. ಶಿಕ್ಷಣಕಾರ್ಯದಲ್ಲಿ **ವಿಷಯ ಪ್ರಾಧಾನ್ಯ** ತತ್ತ್ವಕ್ಕಿಂತ **ಶಿಶುಪ್ರಾಧಾನ್ಯ** ತತ್ತ್ವಕ್ಕೆ ಹೆಚ್ಚು ಮಾನ್ಯತೆ ದೊರಕಿದೆ. ಶಿಕ್ಷಣಪ್ರಪಂಚದಲ್ಲಿ ಬಾಲಕನು ಕೇಂದ್ರಸ್ಥಾನದಲ್ಲಿರುತ್ತಾನೆ. ಬಾಲಕನ ವ್ಯಕ್ತಿತ್ವಕ್ಕೆ ಗೌರವವನ್ನು ಕೊಡುವದು ಅತ್ಯಾವಶ್ಯಕವೆಂದು ಎಲ್ಲರಿಗೂ ವಿದಿತವಾಗಿದೆ. ವಿದ್ಯಾರ್ಜನೆಯು ಶಿಕ್ಷಣದ ಅಂತಿಮ ಧ್ಯೇಯವಾಗಿರದೆ ವ್ಯಕ್ತಿತ್ವವಿಕಾಸದ ಒಂದು ಮುಖ್ಯ ಸಾಧನೆಯಾಗಿರುತ್ತದೆ. ಈ ಹೊಸ ದೃಷ್ಟಿಕೋನವು ಶಿಕ್ಷಣದ ಧ್ಯೇಯ-ವಿಷಯ-ಪದ್ಧತಿ, ಶಿಕ್ಷಕನ ಸ್ಥಾನ-ಮಾನ, ಶಾಲೆಯ ಶಿಸ್ತುವಾತಾವರಣ ಮುಂತಾದ ಎಲ್ಲ ವಿಷಯಗಳಲ್ಲಿ ಅತ್ಯಂತ ಮಹತ್ತ್ವವಾದ ಬದಲಾವಣೆಗಳನ್ನುಂಟುಮಾಡಿದೆ.

**ಶಿಕ್ಷಣದ ಧ್ಯೇಯ:**— ಮೊದಲು ಶಿಕ್ಷಣದ ಧ್ಯೇಯಗಳಲ್ಲುಂಟಾದ ಬದಲಾವಣೆಗಳನ್ನು ವಿಚಾರಿಸುವಾ. "ಶಿಕ್ಷಣವು ಸಂಪೂರ್ಣ ಜೀವನದ ಪೂರ್ವ ಸಿದ್ಧತೆ" ಎಂದು **ಸ್ಪೆನ್ಸರನು** ಹೇಳಿದ ಉಕ್ತಿಯೇ ಬಹುಕಾಲದ ವರೆಗೆ ವಾಡಿಕೆಯಲ್ಲಿತ್ತು. ಆದರೆ, "ಶಿಕ್ಷಣವು ಜೀವನದ ಪೂರ್ವ

ಸಿದ್ಧತೆಯಲ್ಲ, ಅದು ಜೀವನವೇ" ಎಂದು ಆಧುನಿಕ ಶಿಕ್ಷಣ ಸುಧಾರಕರು ಅಭಿಪ್ರಾಯಪಡುತ್ತಾರೆ. ಶಿಕ್ಷಣವು ಜೀವನದ ಅಭಿವೃದ್ಧಿಯಿಂದುಂಟಾಗುವ ವ್ಯಕ್ತಿತ್ವವಿಕಾಸವೆಂದು ಈಗ ತಿಳಿವಳಿಕೆಯುಂಟಾಗಿದೆ. ಜೀವನದ ಅಭಿವೃದ್ಧಿಯು ಕೇವಲ ಶಾರೀರಿಕ ಅಥವಾ ಮಾನಸಿಕ ಬೆಳವಣಿಗೆಯಲ್ಲ; ಅದು ಇವೆರಡರ ಸಮನ್ವಯ ಬೆಳವಣಿಗೆಯಾಗಿರುತ್ತದೆ. ಈ ಬೆಳವಣಿಗೆ ಉಂಟಾಗಬೇಕಾದರೆ, ಬಾಲಕರಲ್ಲಿ ಸಹಜವಾಗಿದ್ದ ಕ್ರಿಯಾತ್ಮಕ ಚೈತನ್ಯಗಳನ್ನು ಹೊರಗೆಡಹಬೇಕು; ಅವುಗಳ ಬೆಳವಣಿಗೆಗೆ ಅವಕಾಶವನ್ನು ಕಲ್ಪಿಸಿಕೊಡಬೇಕು; ಹಾಗು ಸ್ವಸಾಮರ್ಥ್ಯ ಪ್ರಕಾಶನಕ್ಕೆ ಸರಿಯಾದ ಪರಿಸ್ಥಿತಿ ಸನ್ನಿವೇಶಗಳನ್ನು ಒದಗಿಸಿ ಕೊಡಬೇಕು; ಅವುಗಳ ನಿರ್ಮಾಣ ಮಾಡಿಕೊಡಬೇಕು.

**ಶಿಕ್ಷಣದ ವಿಷಯ-ಪದ್ಧತಿ:—** ಹಳೆಯ ಶಿಕ್ಷಣವಲ್ಲಿ ಮಕ್ಕಳಿಗೆ ಸುಲಭವಾಗಿ ತಿಳಿಯದ ವಿಷಯಗಳೇ ಪಾಠ ವಿಷಯಗಳಾಗಿದ್ದವು. ಪಾಠ ವಿಷಯಗಳು ಗಹನವಿದ್ದಷ್ಟು ಮಹತ್ತ್ವವಾದವುಗಳೆಂಬ ಗ್ರಹಿಕೆಯಿತ್ತು. ಪ್ರಬುದ್ಧನು ಅಭ್ಯಸಿಸುವ ವಿಷಯಗಳನ್ನೇ ಬಾಲಕನು ಶ್ರಮಬಟ್ಟು ಕಲಿಯಬೇಕಾಗಿದ್ದಿತು. ಬಾಲಕನಿಗೆ ರುಚಿಸದಂಥ ಕೆಲವು ವಿಷಯಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳುವಂತೆ ಪ್ರೇರಿಸಿ ಸ್ಮರಣಶಕ್ತಿಯನ್ನು ಬಲಪಡಿಸುವದು ಅಗತ್ಯವಾಗಿತ್ತು. ಕೇವಲ ಸತ್ತ್ವವಿಲ್ಲದ ಅನುಕರಣ ಕ್ರಮವು ಬಳಕೆಯಲ್ಲಿದ್ದಿತು. ಬಾಲಕರು ಗಿಳಿಯ ಹಾಗೆ ಪಾಠ ಮಾಡುತ್ತಿದ್ದರು; ಅರ್ಥದ ಕಡೆಗೆ ಲಕ್ಷ್ಯವೇ ಇರಲಿಲ್ಲ. ಹೊಸ ಶಿಕ್ಷಣದಲ್ಲಿ ವಿಷಯಗಳ ಆಯ್ಕೆ ಹಾಗು ಅವುಗಳನ್ನು ಕಲಿಸುವ ಕ್ರಮ ಇವು ಮನಶ್ಶಾಸ್ತ್ರಾನುಗಾಮಿಯಾಗಿವೆ. ಬಾಲಕನ ಮನೋವಿಕಾಸದ ವಿವಿಧ ಮೆಟ್ಟಿಗಳಿಗೆ ಸುಗಮ, ಸುಸಂಗತವಾಗುವಂಥ ವಿಷಯಗಳನ್ನು ಆರಿಸಬೇಕಾಗುತ್ತದೆ. ಹೊರಗಿನಿಂದ ವಿಷಯಗಳನ್ನು ಮಕ್ಕಳ ಮನಸ್ಸೆಂಬ ಪಾತ್ರೆಯಲ್ಲಿ ತುಂಬುವದೇ ಶಿಕ್ಷಣದ ಕಾರ್ಯವೆಂಬ ತಪ್ಪು ತಿಳಿವಳಿಕೆಯು ದೂರಾಗಿ ಸರಿಯಾದ ಸನ್ನಿವೇಶಗಳನ್ನೇರ್ಪಡಿಸಿ ಬಾಲಕರಲ್ಲಿರುವ ಸಹಜ ಶಕ್ತಿಗಳನ್ನು ಪ್ರಚೋದನೆಗೊಳಿಸಿ ಅವು ವಿಕಾಸ ಹೊಂದುವಂತೆ ಮಾಡುವದೇ ಶಿಕ್ಷ

ಣದ ಆದ್ಯ ಕರ್ತವ್ಯವೆಂಬ ಭಾವನೆಯು ದೃಢವಾಗಿದೆ. ಅಭ್ಯಾಸ ವಿಷಯುಗಳನ್ನು ಬಾಲಕರು ಸ್ವತಃ ತಮ್ಮ ಸಹಜ ಶಕ್ತಿಗಳನ್ನು ಪ್ರಯೋಗಿಸಿ ಈಗ ತಿಳಿಯುಕೊಳ್ಳಬೇಕಾಗುತ್ತದೆ. ಮಕ್ಕಳ ಶಿಕ್ಷಣ ಕಾರ್ಯದಲ್ಲಿ ಅವರ ಆಸಕ್ತಿ, ಒಲವು, ಸ್ವೋದ್ಯಮ, ಸ್ವಪ್ರಯತ್ನ ಇವುಗಳಿಗೆ ಹೆಚ್ಚಾಗಿ ಮಹತ್ತ್ವವು ದೊರೆತಿದೆ. ಈಗ ಪ್ರಯೋಗಿಸಲ್ಪಡುವ **ಡಾಲ್ಟನ್, ಯೋಜನಾ, ಶೋಧಕ, ಕ್ರೀಡನ** ಮುಂತಾದ ಶಿಕ್ಷಣ ಪದ್ಧತಿಗಳ ಉದ್ದೇಶವಾದರೂ ಇದೇ ಇರುತ್ತದೆ. ಬಾಲಕರು ಸ್ವಪ್ರಯತ್ನದಿಂದ ಜ್ಞಾನಾರ್ಜನೆಯನ್ನು ಮಾಡಬೇಕಾಗಿರುವದರಿಂದ ಶಿಕ್ಷಣಕ್ಷೇತ್ರದಲ್ಲಿ ಅವರ ಹೊಣೆಗಾರಿಕೆಗಳೇ ವಿಶೇಷವಾಗಿರುತ್ತವೆ. ಆದುದರಿಂದಲೇ ಹೊಸ ಶಿಕ್ಷಣವನ್ನು **ಸ್ವಯಂ ಶಿಕ್ಷಣ** ವೆಂದು ಕರೆಯುವ ರೂಢಿಯಿದೆ.

**ಶಿಕ್ಷಕನ ಸ್ಥಾನ-ಕರ್ತವ್ಯ:**— ಹೊಸ ಶಿಕ್ಷಕನ ಮೊದಲಿನ ಸ್ಥಾನಮಾನಗಳಲ್ಲಿ ಬದಲಾವಣೆಗಳಾಗಿವೆ. ಶಿಕ್ಷಣವು ತ್ರಿಮುಖವಾದುದೆಂದು **ಡಾ. ಜೆ. ಇ. ಎಡ್ಯಾಮ್ಸನ್ನನು** ಒಂದು ಕಡೆಗೆ ಹೇಳಿದ್ದಾನೆ. ಬಾಲಕ—ವಿಷಯ—ಶಿಕ್ಷಕ ಇವೇ ಶಿಕ್ಷಣದ ಮೂರು ಮುಖಗಳು. ಹಳೆಯ ಶಿಕ್ಷಣದಲ್ಲಿ ಅವುಗಳ ಕ್ರಮವು ಹೀಗಿದ್ದಿತು: ಶಿಕ್ಷಕ—ವಿಷಯ—ಬಾಲಕ. ಶಿಕ್ಷಕನು ಪ್ರಥಮ ಸ್ಥಾನದಲ್ಲಿದ್ದನು; ಬಾಲಕನು ಅವನ ಅನುಯಾಯಿಯಾಗಿದ್ದನು. ಬಾಲಕನ ವ್ಯಕ್ತಿತ್ವಕ್ಕೆ ಗಮನವನ್ನೇ ಕೊಟ್ಟಿರಲಿಲ್ಲ. ಬಾಲಕನ ವ್ಯಕ್ತಿತ್ವವನ್ನು ಮೂಲೆಗೊತ್ತಿ ಇಲ್ಲವೆ ಕೊಲೆಮಾಡಿ ತನ್ನ ವ್ಯಕ್ತಿತ್ವವು ಅವನಲ್ಲಿ ನಾಟುವಂತೆ ಶಿಕ್ಷಕನು ಯಾವಾಗಲೂ ಪ್ರಯತ್ನಿಸುತ್ತಿದ್ದನು. ಬಾಲಕನ ಮನೋವಿಕಾಸದ ರೀತಿನಿಯಮಗಳನ್ನು ತಿಳಿದುಕೊಳ್ಳಲು ಯತ್ನಿಸದೆ ಶಿಕ್ಷಕನು ತನಗೆ ಉತ್ತಮವೆನಿಸಿದ ವಿಷಯಗಳನ್ನು ಕಲಿಸುತ್ತಿದ್ದನು. ಅವುಗಳ ಮುಖಾಂತರ ಕೆಲವು ಮಾನಸಿಕ ಶಕ್ತಿಗಳು ಬೆಳೆಯುವವೆಂಬ ಭರವಸೆಯಿಂದ ಬಾಲಕನ ಪರವಾಗಿ ಶಿಕ್ಷಕನು ತಾನೇ ವಿಚಾರ ನಿರ್ಣಯಗಳನ್ನು ಮಾಡುತ್ತಿದ್ದನು, ಜ್ಞಾನ-ಅನುಭವಗಳನ್ನು ಪಡೆಯುತ್ತಿದ್ದನು, ಹಾಗು ಅವುಗಳನ್ನು ವ್ಯವಹಾರದಲ್ಲಿ ತರುತ್ತಿದ್ದನು. ಈಚೆಗೆ ಇದೆಲ್ಲವೂ ಬದಲಾಗಿದೆ. ಹೊಸ ಶಿಕ್ಷಣದಲ್ಲಿ ಶಿಕ್ಷಕನಿಗೆ ಹೆಚ್ಚು

ಮಹತ್ತ್ವವನ್ನು ಕೊಡದೆ ಬಾಲಕನಿಗೆ ಅಗ್ರಸ್ಥಾನವನ್ನು ಕೊಟ್ಟಿರುವರು. ಶಿಕ್ಷಕನು ತನ್ನ ವ್ಯಕ್ತಿತ್ವವನ್ನು ಬದಿಗಿಟ್ಟು ಬಾಲಕನ ವ್ಯಕ್ತಿತ್ವವನ್ನು ಕೇಂದ್ರದಲ್ಲಿಡುವದಕ್ಕೆ ಯಾವಾಗಲೂ ಅವಕಾಶವನ್ನು ಕಲ್ಪಿಸಬೇಕಾಗುತ್ತದೆ. ಬಾಲಕನಿಗೂ ಅಭ್ಯಾಸ ವಿಷಯಗಳಿಗೂ ಪ್ರತ್ಯಕ್ಷ ಸಂಬಂಧವು ಹೆಚ್ಚಾಗುತ್ತ ನಡೆದಿರುವದರಿಂದ ಶಿಕ್ಷಕನ ಮಧ್ಯಸ್ಥಿಕೆಯು ಕ್ರಮೇಣ ಕಡಿಮೆಯಾಗುತ್ತಲಿದೆ. ಶಿಕ್ಷಕನು ಎಷ್ಟೇ ಪ್ರತಿಭಾಶಾಲಿಯೂ ಪಂಡಿತನೂ ಆಗಿದ್ದರೂ ತಾನೇ ಹೆಚ್ಚು ಮಾತನಾಡದೆ ಬಾಲಕರೇ ಮುಂದೆ ಚಟುವಟಿಕೆಯನ್ನು ತೋರುವಂತೆ ಮಾಡಬೇಕಾಗುತ್ತದೆ. ಸ್ವಪ್ರಯತ್ನದಿಂದ ಸಂಪಾದಿಸಿದ ಜ್ಞಾನವು ಮನಸ್ಸಿನಲ್ಲಿ ಸ್ಥಿರವಾಗಿ ನಿಲ್ಲುವದು; ಅದರಿಂದ ಬಾಲಕರಿಗೆ ಸ್ವಾನುಭವವು ದೊರೆತು ಆನಂದ ಉಂಟಾಗುವದು; ಮತ್ತು ಅದನ್ನು ವ್ಯವಹಾರದಲ್ಲಿ ಉಪಯೋಗಿಸಲು ಅವರಲ್ಲಿ ಜಾಣತನವೂ ಆತ್ಮವಿಶ್ವಾಸವೂ ಉಂಟಾಗುವವು. ಶಿಕ್ಷಕನ ಕರ್ತವ್ಯವನ್ನು ಕುರಿತು **ಫ್ರೊಬೆಲ್ಲನು** ಹೀಗೆ ಹೇಳಿದ್ದಾನೆ; "ಅವನು ( ಶಿಕ್ಷಕನು ) ಮಕ್ಕಳ ಹಿತಚಿಂತಕನಾಗಿದ್ದು ಅವರು ಮಾಡುತ್ತಿರುವ ಕೆಲಸದ ಮೇಲ್ವಿಚಾರಣೆ ಮಾಡುತ್ತಿರಬೇಕು. ಪ್ರತಿಯೊಬ್ಬ ಬಾಲಕನು ತನ್ನ ನೈಸರ್ಗಿಕ ಶಕ್ತಿಗಳಿಗನುಸಾರವಾಗಿ ಪ್ರವರ್ತಿಸುವಂತೆ ತಕ್ಕ ಸನ್ನಿವೇಶಗಳನ್ನು ಏರ್ಪಡಿಸಬೇಕು. ಮುಖ್ಯವಾಗಿ ಶಿಕ್ಷಕನು ಬಾಲಕನನ್ನು ಅನುಸರಿಸಬೇಕು." ಈ ಮಾತು ಆಧುನಿಕ ಶಿಕ್ಷಕನಿಗೆ ಸಂಪೂರ್ಣವಾಗಿ ಅನ್ವಯಿಸುತ್ತದೆ.

**ಶಾಲೆಯ ಶಿಸ್ತು:**—ಇನ್ನು ಶಿಸ್ತಿನ ವಿಷಯವಾಗಿ ಹೊಸ ಶಿಕ್ಷಣದ ಮತವೇನಿರುವದೆಂಬದನ್ನು ವಿಚಾರಿಸೋಣ. ಹಳೆಯ ಶಿಕ್ಷಣದಲ್ಲಿ ಶಿಸ್ತು ಬೆತ್ತದ ಬೆದರಿಕೆಯನ್ನೇ ಅವಲಂಬಿಸಿತ್ತು. ಭಯ, ಜಿಗುಪ್ಸೆ, ಕಾಠಿಣ್ಯ, ಉಗ್ರತೆ, ಕ್ರೂರದೇಹದಂಡನೆ ಮೊದಲಾದವುಗಳಿಂದ ಶಾಲೆಯ ವಾತಾವರಣವು ತುಂಬಿ ತುಳುಕುತ್ತಿತ್ತು. ಶಾಲೆಗಳು ಸೆರೆಮನೆಗಳೆಂದೂ ಶಿಕ್ಷಕರು ಯಮದೂತರೆಂದೂ ಬಾಲಕರು ತಿಳಿದಿದ್ದರು. ಬಾಲಕರಿಗೆ ಯಾವದೇ ತರಹದ ಸ್ವಾತಂತ್ರ್ಯವು ಇರುತ್ತಿರಲಿಲ್ಲ. ಅವರು ಕುರಿಗಳಂತೆ ನಡೆದುಕೊಳ್ಳಬೇಕಾಗುತ್ತಿತ್ತು. ಒಟ್ಟಾರೆ, ಹಳೆಯ ಪದ್ಧತಿಯ ಶಿಸ್ತು

ಬಾಲಕರ ಸಹಜ ವಿಕಾಸಕ್ಕೆ ತಡೆಯನ್ನುಂಟುಮಾಡುವಂತಹದಿತ್ತು. ಇಂಥ ಶಿಸ್ತು ಅನವಶ್ಯಕವಾದದ್ದೆಂದೂ ಅಸ್ವಾಭಾವಿಕವಾದದ್ದೆಂದೂ ಹೊಸ ಶಿಕ್ಷಣ ತಜ್ಞರು ಅಭಿಪ್ರಾಯಪಡುತ್ತಾರೆ. ಶಾಲೆಯ ವಾತಾವರಣವು ಮನೆಯ ವಾತಾವರಣದಂತೆ ಪ್ರೇಮ, ವಿಶ್ವಾಸ, ಸ್ವಾತಂತ್ರ್ಯ ಇವುಗಳಿಂದ ಕೂಡಿ ಆನಂದದಾಯಕವಾಗಿರಬೇಕು. ಈಗ ಶಾಲೆಯಲ್ಲಿ ಕ್ರೂರದೇಹದಂಡನೆಗೆ ಸ್ಥಾನವಿಲ್ಲ. ಮಕ್ಕಳು ತಪ್ಪುಮಾಡಿದರೆ ಅವರನ್ನು ದಂಡಿಸುವದರ ಬದಲು ಅವರ ತಪ್ಪಿನ ಮೂಲವನ್ನು ಶಿಕ್ಷಕರು ಕಂಡು ಹಿಡಿಯಬೇಕು. ವೈದ್ಯನು ರೋಗಿಯನ್ನು ಚನ್ನಾಗಿ ಪರೀಕ್ಷಿಸಿ ಬಳಿಕ ಅವನ ಚಿಕಿತ್ಸೆ ಮಾಡುವಂತೆ ಶಿಕ್ಷಕನು ಅಪರಾಧಿಯ ದುರ್ವರ್ತನೆಯ ಕಾರಣಗಳನ್ನು ಕಂಡು ಹಿಡಿದು ಅವುಗಳನ್ನು ಹೋಗಲಾಡಿಸುವದಕ್ಕೆ ಬೇಕಾದ ಉಪಾಯಗಳನ್ನು ಕೈಕೊಳ್ಳಬೇಕು. ತಪ್ಪುಗಾರನೊಡನೆ ಶಿಕ್ಷಕನು ಹೇಗೆ ನಡೆದುಕೊಳ್ಳಬೇಕೆಂಬುದನ್ನು **ಕೊಮೆನಿಯಸ್ಸನು** ಹೀಗೆ ಹೇಳಿದ್ದಾನೆ: "ವಾದ್ಯಗಾರನು ವೀಣೆಯಿಂದ ಸುಸ್ವರವನ್ನು ಹುಟ್ಟಿಸಲಿಕ್ಕೆ ತನಗೆ ಬಾರದಿದ್ದರೆ ಅದನ್ನು ಗೋಡೆಗೆ ಅಪ್ಪಳಿಸದೆ ಅಥವಾ ಅದಕ್ಕೆ ಏಟುಗಳನ್ನು ಕೊಡದೆ ತನ್ನ ಜಾಣತನವನ್ನೆಲ್ಲ ಉಪಯೋಗಿಸಿ ಅದರಿಂದ ಸುಶ್ರಾವ್ಯ ನಾದವನ್ನು ಹೊರಡಿಸಲು ಯತ್ನಿಸುತ್ತಾನೆ. ಹಾಗೆಯೇ ನಾವು ನಮ್ಮ ಜಾಣತನವನ್ನು ಉಪಯೋಗಿಸಿ ತಪ್ಪುಮಾಡುವ ಪ್ರವೃತ್ತಿಯುಳ್ಳ ಮಕ್ಕಳನ್ನು ಒಳ್ಳೇ ಹಾದಿಗೆ ಹಚ್ಚಬೇಕು." ಈಗ ಹಳೆಯ ಪರಿಸ್ಥಿತಿಯು ಕ್ರಮೇಣ ಇಲ್ಲದಂತಾಗಿ ಹೊಸ ಪರಿಸ್ಥಿತಿಯು ಉಂಟಾಗುತ್ತಲಿದೆ. ಸಾಮಾಜಿಕ ಪರಿಸ್ಥಿತಿಯು ಅರ್ಧ ಶತಮಾನದ ಹಿಂದೆ ಇದ್ದಂತೆ ಈಗ ಇರುವದಿಲ್ಲ. ಪ್ರಜಾಸತ್ತಾತ್ಮಕ ವಿಚಾರಗಳು ಸಮಾಜದಲ್ಲಿ ಹೆಚ್ಚುಹೆಚ್ಚಾಗಿ ಪಸರಿಸಿದಂತೆ ಸ್ವನಿಯಂತ್ರಣದ ಅವಶ್ಯಕತೆಯು ಜನತೆಗೆ ಹೆಚ್ಚುಹೆಚ್ಚಾಗಿ ಅನಿಸಹತ್ತಿದೆ. ಈಗ ಎಲ್ಲಕಡೆಯಲ್ಲಿಯೂ ಸ್ವಾತಂತ್ರ್ಯದ ಕೂಗು ಕೇಳಬರುತ್ತದೆ. ಶಾಲೆಯೆಂಬ ಸಮಾಜದಲ್ಲಿ ಮಕ್ಕಳಿಗೆ ಪೂರ್ಣ ಸ್ವಾತಂತ್ರ್ಯವಿರಬೇಕೆಂಬ ಭಾವನೆಯು ಈಗ ಪ್ರಚಾರದಲ್ಲಿದೆ. ಮಕ್ಕಳು ಸ್ವಸಂತೋಷದಿಂದ ಶಾಲೆಯ ನಿಯಮಗಳನ್ನು ಪಾಲಿಸಬೇಕು, ಶಿಕ್ಷಕನಿಗೆ ಅಧೀನರಾಗಬೇಕು. ಶಾಲೆಯ ಒಳಗಿನ ಆಡಳಿತೆಯನ್ನು ಬಾಲ

ಕರೇ ನಿರ್ವಹಿಸಿ ಶಿಸ್ತಿನ ಮಹತ್ತ್ವವನ್ನು ತಾವೇ ತಿಳಿದುಕೊಳ್ಳಬೇಕು. ಹೊಸ ಶಿಕ್ಷಣವು ಬಾಲಕರಿಗೆ ಸ್ವತಂತ್ರವಾಗಿ ನಿರ್ಣಯಕ್ಕೆ ಬರುವಂತೆ ನಾನಾರೀತಿಯಿಂದ ಅವಕಾಶವನ್ನು ಕಲ್ಪಿಸಿಕೊಟ್ಟು ಸ್ವಸಂತೋಷಯುಕ್ತವಾದ ಅಧೀನತೆಯನ್ನು ಕಲಿಸುತ್ತದೆ.

**ಪರೀಕ್ಷೆಗಳು:—** ಹಳೆಯ ಶಿಕ್ಷಣದಲ್ಲಿ ವಿದ್ಯಾಭ್ಯಾಸದ ಫಲಗಳನ್ನು ಶಾಸ್ತ್ರೀಯವಾಗಿ ಅಳತೆಮಾಡಲು ಸಾಧ್ಯವಿರಲಿಲ್ಲ. ಇತ್ತೀಚಿಗೆ ವಿಜ್ಞಾನ ಶಾಸ್ತ್ರವು ಪ್ರಬಲವಾಗಿ ಪ್ರಪಂಚದ ದೃಶ್ಯ ಮತ್ತು ಅದೃಶ್ಯ ಪದಾರ್ಥಗಳನ್ನು ಅಳತೆ ಮಾಡಲು ಪ್ರಯೋಗಗಳು ನಡೆಯುತ್ತಲಿವೆ. ಶಿಕ್ಷಣ ಪ್ರಪಂಚದಲ್ಲಿ ಬಾಲಕರ ಬುದ್ಧಿ ಮಾನವನ್ನೂ ವಿದ್ಯಾಭಿವೃದ್ಧಿಯನ್ನೂ ನಿಶ್ಚಿತವಾಗಿ ಅಳತೆ ಮಾಡಲು ಪ್ರಯತ್ನಗಳು ನಡೆದಿವೆ. ಅದರ ಸಲುವಾಗಿ ಕೆಲವು ಬುದ್ಧಿಮಾಪಕ ಪರೀಕ್ಷೆಗಳು ಸಿದ್ಧವಾಗಿವೆ. ಈ ಹೊಸ ಪರೀಕ್ಷೆಗಳು ರೂಢಿಯಲ್ಲಿರುವ ಪರೀಕ್ಷೆಗಳಿಗಿಂತಲೂ ಶ್ರೇಷ್ಠವಾದವುಗಳೆಂಬುದು ಸಹಜ. ನಿಜವಾಗಿ, ಆಚರಣೆಯಲ್ಲಿದ್ದ ಪರೀಕ್ಷೆಗಳು ಶಿಕ್ಷಣ ಪ್ರಪಂಚದ ದುರಂತಗಳು. ಅವು ಹುರುಳಿಲ್ಲದ ಪರೀಕ್ಷೆಗಳೆಂಬುದು ಪ್ರತಿ ಪರೀಕ್ಷಕನಿಗೆ ಅನುಭವ ಸಿದ್ಧವಾದ ಮಾತು. ಎಷ್ಟೋಸಾರೆ ಹಲವು ಸ್ವಭಾವತಃ ಬುದ್ಧಿವಂತ ಬಾಲಕರು ನಾನಾ ಕಾರಣಗಳ ಮೂಲಕ ಪರೀಕ್ಷೆಯ ಕಾಲದಲ್ಲಿ ಎದೆಯೊಡೆದುಕೊಂಡು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದುವದಿಲ್ಲ. ಹಾಗು ಒಮ್ಮೊಮ್ಮೆ ಕೆಲವು ದಡ್ಡ ಹುಡುಗರು ಅವರ ಯೋಗ್ಯತೆಗೆ ದೊರೆಯಬಹುದಾದ ಗುಣಗಳಿಗಿಂತಲೂ ಹೆಚ್ಚು ಗುಣಗಳನ್ನು ಪಡೆಯುತ್ತಾರೆ. ಆಚರಣೆಯಲ್ಲಿರುವ ಪರೀಕ್ಷೆಗಳ ದಬ್ಬಾಳಿಕೆಯಂತೂ ಹೆಚ್ಚಾಗಿ ಹೋಗಿಬಿಟ್ಟದೆ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವದೇ ಶಿಕ್ಷಣದ ಗುರಿಯಾಗಿಬಿಟ್ಟದೆ. ಪರೀಕ್ಷೆಯ ಪಾಠ ಟಿಪ್ಪಣೆಗಳನ್ನು ಮುಖೋದ್ಗತ ಮಾಡುವ ಪರಿಪಾಠವು ಮಿತಿಮೀರಿ ಬೆಳೆದಿದೆ. ವಾಡಿಕೆಯಾಗಿ ಪರೀಕ್ಷೆಗೆ ಕೂಡ್ರಲಿರುವ ವಿದ್ಯಾರ್ಥಿಯು ಹಗಲಿರುಳು ಶ್ರಮ ವಹಿಸಿ ದುಡಿಯಬೇಕಾಗುವದರಿಂದ ಅವನಿಗೆ ಶಾರೀರಕ ಮಾನಸಿಕ ಅನರ್ಥಗಳುಂಟಾಗುವದು ಸಹಜವು. ಇದಲ್ಲದೆ ರೂಢಿಯಲ್ಲಿರುವ ಪರೀಕ್ಷೆ

ಗಳಿಂದ ಶಾಲೆಗಳ ಮೇಲೆ ಅನೇಕ ದುಷ್ಪರಿಣಾಮಗಳುಂಟಾಗಿವೆ. ಶಾಲೆಗಳು ನಿಜವಾದ ಶಿಕ್ಷಣಸಂಸ್ಥೆಗಳಾಗಿರದೆ ವಿದ್ಯೆಯನ್ನು ಮಾರುವ ಅಂಗಡಿಗಳಾಗಿ ಪರಿಣಮಿಸಿವೆ. ಶಿಕ್ಷಕನ ಯೋಗ್ಯತೆಯು ಪರೀಕ್ಷೆಯಲ್ಲಿ ಉತ್ತೀರ್ಣರಾಗುವ ವಿದ್ಯಾರ್ಥಿಗಳ ಸಂಖ್ಯೆಯಿಂದಲೇ ನಿರ್ಣಯಿಸಲ್ಪಡುವದರಿಂದ ಟಿಪ್ಪಣೆಗಳನ್ನು ಕೊಡುವ ಪದ್ಧತಿಯು ರೂಢವಾಗಿದೆ. ಈ ಪರೀಕ್ಷೆಗಳಿಂದ ಮಕ್ಕಳ ಮನಸ್ಸಿನಲ್ಲಿ ಶಿಕ್ಷಕ-ಶಾಲೆಗಳ ವಿಷಯವಾಗಿ ಅಧಿಕವಾಗಿ ಜಿಗುಪ್ಸೆಯುಂಟಾಗಿದೆ. ಹೊಸ ಪರೀಕ್ಷೆಗಳಲ್ಲಿ ಈ ರೀತಿಯಾಗಲು ಅವಕಾಶವಿಲ್ಲ. ಏಕೆಂದರೆ ಆಚರಣೆಯಲ್ಲಿದ್ದ ಪರೀಕ್ಷೆಗಳಲ್ಲಿ ಸ್ವಯಂ ನಿರ್ಣಿತ ( subjective ) ಅಭಿಪ್ರಾಯ-ತೀರ್ಮಾನಗಳಿಗೆ ಎಡೆಯಿದ್ದಂತೆ ಈ ಹೊಸ ಪರೀಕ್ಷೆಗಳಲ್ಲಿಲ್ಲ. ಇವು ಕೇವಲ ವಿಷಯಾಶ್ರಯ ( objective ) ವಾಗಿರುವದರಿಂದ ಇವುಗಳ ತೀರ್ಮಾನಗಳಲ್ಲಿ ಯಾರಿಗೂ ಯಾವದೇ ತರಹದ ಸಂದೇಹವಿರುವದಿಲ್ಲ. ಇವುಗಳಿಂದ ಬಾಲಕರ ಅಭಿವೃದ್ಧಿಯನ್ನು ನಿಶ್ಚಿತ ಅಳೆಯುವದು ಸುಲಭವದೆ.

ಸಾರಾಂಶ, ಹೊಸ ಶಿಕ್ಷಣವೆಂಬುದು ಒಂದು ಹೊಸ ದೃಷ್ಟಿ. **ಶಿಶುಪ್ರಾಧಾನ್ಯ** ಅದರ ಅಸ್ತಿವಾರ. ಅದರಲ್ಲಿ ಹಿಂದಿನ ಅನುಭವಸಾರವೆಲ್ಲ ಶಾಸ್ತ್ರೀಯ ತಳಹದಿಯ ಮೇಲೆ ರಚಿತವಾಗಿದೆ. ಆದುದರಿಂದ ಶಿಕ್ಷಣವು ಸುಲಭವೂ ಸರಸವೂ ಉಪಯೋಗವುಳ್ಳದ್ದೂ ಆಗಿ ವ್ಯಕ್ತಿಯ ಪರಿಪೂರ್ಣತೆಗೆ ಅತ್ಯಂತ ಸಹಾಯಕವಾಗಿದೆ.

# ೨ ಶಿಕ್ಷಣವೆಂದರೇನು?

ಕಲಿಯುವದು ಮಕ್ಕಳಿಗೆ ಒಂದು ಸಹಜವಾದ ಧರ್ಮವು. ಹುಟ್ಟಿದಂದಿನಿಂದ ಸಾಯುವವರೆಗೆ ಅವರು ಪ್ರತಿಕ್ಷಣ ಅನುಭವಗಳನ್ನು ಹೊಂದುತ್ತಲಿ ಇರುತ್ತಾರೆ; ಅವರು ಒಂದಿಲ್ಲೊಂದು ಸಂಗತಿಯನ್ನು ಕಲಿಯುತ್ತಲೆ ಇರುತ್ತಾರೆ. ಅವರಿಗೆ ಗೊತ್ತಿಲ್ಲದ ಹಾಗೆ ಶಿಕ್ಷಣವು ಸಾಗುತ್ತಲಿ ಇರುತ್ತದೆ.

ಶಿಶುವು ಬೆಳೆಯುತ್ತ ನಡೆದಂತೆ ಎಷ್ಟೋ ಸಂಗತಿಗಳನ್ನು ತನ್ನಷ್ಟಕ್ಕೆ ತಾನೇ ಕಲಿಯುವದು. ಹೊಟ್ಟೆಹೊಸೆಯಲಿಕ್ಕೆ, ಅಡ್ಡಾಡಲಿಕ್ಕೆ, ತಂದೆ ತಾಯಿ ಅಣ್ಣ ತಮ್ಮಂದಿರನ್ನು ಗುರುತಿಸಲಿಕ್ಕೆ, ಕೂಡಿ ಆಡಲಿಕ್ಕೆ, ಹೀಗೆ ಅನೇಕ ಸಂಗತಿಗಳನ್ನು ನೋಡಿ, ಮಾಡಿ, ಕೂಡಿ, ಆಡಿ ಮಗುವು ಸಹಜವಾಗಿ ಕಲಿಯುತ್ತ ಹೋಗುತ್ತದೆ. ಮಕ್ಕಳು ಈ ರೀತಿಯಿಂದ ಸ್ವತಂತ್ರವಾಗಿ ಕಲಿಯುವ ವಿಧಾನಕ್ಕೆ **ಸ್ವಶಿಕ್ಷಣ** ಇಲ್ಲವೆ **ಸಹಜ ಶಿಕ್ಷಣ** ಎಂಬ ಹೆಸರನ್ನು ಕೊಡಬಹುದು. ಇಂಥ ಶಿಕ್ಷಣ ಕ್ರಮದಲ್ಲಿ ಯಾವದೇ ತರದ ವ್ಯವಸ್ಥೆಯಿಲ್ಲವಾದುದರಿಂದ ಇದಕ್ಕೆ **ಅವ್ಯವಸ್ಥಿತ ಶಿಕ್ಷಣ**ವೆಂದೂ ಕರೆಯಬಹುದು.

ಮಕ್ಕಳು ತಾವೇ ಕಲಿಯಲೆಂದು ಬಿಟ್ಟರೆ ಅವರು ಸಾವಕಾಶವಾಗಿ ಕಲಿಯಬಹುದು; ಕಲಿಯಬೇಕಾದ ಸಂಗತಿಗಳನ್ನು ಬಿಡಬಹುದು; ಕಲಿಯಬಾರದ ಸಂಗತಿಗಳನ್ನು ಕಲಿಯಬಹುದು; ಇದಲ್ಲದೆ ಪರಂಪರೆಯಿಂದ ಬಂದ ಮಾನವ ಜ್ಞಾನದ ಫಲವು ಅವರಿಗೆ ಲಭಿಸದೆ ಹೋಗಬಹುದು. ಆದುದರಿಂದ ಸಹಜ ಶಿಕ್ಷಣವು ಮಂದಗಾಮಿಯಾಗಿರುವದಲ್ಲದೆ ಅನೇಕ ಸಂದರ್ಭಗಳಲ್ಲಿ ನಿರರ್ಥಕವಾದದ್ದೂ ಅಪಾಯಕರವಾದದ್ದೂ ಆಗುವ ಸಂಭವ ಬಹಳ.

ಸ್ವಶಿಕ್ಷಣದಲ್ಲಿ ಮೇಲೆ ಹೇಳಿದ ಲೋಪದೋಷಗಳಿರುವದರಿಂದ ಮಕ್ಕಳಿಗೆ ಬುದ್ಧಿಪೂರ್ವಕವಾಗಿ ಸುವ್ಯವಸ್ಥಿತವಾದ ಶಿಕ್ಷಣ ಕೊಡುವದು ಅತ್ಯಗತ್ಯವು. ಯೋಗ್ಯವಾದ ಜ್ಞಾನವೂ ಉಪಯುಕ್ತವಾದ ಶಕ್ತಿ ವಿಶೇಷಗಳೂ ಮಕ್ಕಳಿಗೆ ದೊರೆಯಲೆಂದು ಅವರಿಗೆ ಪ್ರಯತ್ನಪೂರ್ವಕ ವಾಗಿ ಹಾಗು ಕ್ರಮಬದ್ಧವಾದ ರೀತಿಯಲ್ಲಿ ನೆರವಾಗುವದೇ ನಿಜವಾದ ಶಿಕ್ಷಣದ ಕಾರ್ಯ. ಇದುವೆ ಸುವ್ಯವಸ್ಥಿತಗೊಳಿಸಲ್ಪಟ್ಟ ಶಿಕ್ಷಣ. ರೂಢಿ ಯಲ್ಲಿ ನಾವು ಶಿಕ್ಷಣವೆನ್ನುವದು ಇದಕ್ಕೇ. ಆದುದರಿಂದ ಶಿಕ್ಷಣವನ್ನು ಸೂತ್ರರೂಪದಲ್ಲಿ ನಾವು ಹೀಗೆ ನಿರೂಪಿಸಬಹುದು: **ಶಿಕ್ಷಣವು ಜ್ಞಾನದ ಮೂಲಕ ಮಕ್ಕಳ ವಿಕಾಸವನ್ನು ಉದ್ದೇಶಪೂರ್ವಕವಾಗಿ ರೂಪು ಗೊಳಿಸುವ ಒಂದು ವಿಧಾನವು.**

ಶಿಕ್ಷಕನ ಕಾರ್ಯವನ್ನು ಒಂದು ಸಸಿಯನ್ನು ಬೆಳೆಯಿಸುವ ಕ್ರಮಕ್ಕೆ ಹೋಲಿಸಬಹುದು. ಒಂದು ಸಸಿಯನ್ನು ಬೆಳೆಯಿಸುವಾಗ ತೋಟಿಗನು ಸಸಿಯ ಬೆಳವಣಿಗೆಗೆ ಸಾಧಕಬಾಧಕವಾದ ಎಲ್ಲ ಸಂಗತಿಗಳನ್ನು ಮೊದಲು ತಿಳಿದುಕೊಳ್ಳುತ್ತಾನೆ. ಬಳಿಕ ಅದರ ಸಂಪೂರ್ಣವಾದ ಬೆಳವಣಿಗೆಗೆ ಆವಶ್ಯಕವಾದ ಸಂಗತಿಗಳನ್ನು ಮಾತ್ರ ಅದಕ್ಕೆ ಒದಗಿಸಿಕೊಡುತ್ತಾನೆ. ಸಸಿಯು ಬೆಳೆದು ದೊಡ್ಡ ಮರವಾಗುವವರೆಗೆ ಅವನು ಅದಕ್ಕೆ ನಿಯಮ ದಿಂದ ಗೊಬ್ಬರ ಹಾಕುವನು, ಕಾಲಕಾಲಕ್ಕೆ ನೀರು ಉಣಿಸುವನು, ಅದು ಅಂಕಡೊಂಕಾಗಿ ಬೆಳೆಯದಂತೆ ಅದರ ಸುತ್ತಲೂ ಹಂದರ ಕಟ್ಟುವನು, ಅದಕ್ಕೆ ಹುಳಹುಪ್ಪಡಿಗಳ ತೊಂದರೆ ತಟ್ಟದಂತೆ ಉಪಾಯಗಳನ್ನು ಕೈಕೊಳ್ಳುವನು. ಹೀಗೆ ಅವನು ಸಸಿಯ ಇಚ್ಛಿತವಾದ ಬೆಳವಣಿಗೆಗಾಗಿ ಎಲ್ಲ ಕಾರ್ಯಗಳನ್ನು ಬಹಳ ಜಾಗರೂಕತೆಯಿಂದಲೂ ಎಚ್ಚರದಿಂದಲೂ ಮಾಡುತ್ತಾನೆ. ಶಿಕ್ಷಕನ ಉದ್ಯೋಗವಾದರೂ ಅದರಂತೆಯೇ. ಮಕ್ಕಳ ಶಿಕ್ಷಣ ಕಾರ್ಯವನ್ನು ಕೈಕೊಳ್ಳುವ ಪೂರ್ವದಲ್ಲಿ ಶಿಕ್ಷಕನು ಅವರ ಯೋಗ್ಯ ವಿಕಾಸಕ್ಕೆ ಸಾಧಕಬಾಧಕವಾದ ಸಂಗತಿಗಳನ್ನು ಅರಿತು ಕೊಂಡು, ಆಮೇಲೆ ಅವರನ್ನು ವ್ಯವಸ್ಥಿತ ರೀತಿಯಿಂದ ವಿಕಾಸಗೊಳಿಸ ಲಿಕ್ಕೆ ಬೇಕಾದ ಸನ್ನಿವೇಶ, ಜ್ಞಾನ, ಅನುಭವಗಳನ್ನು ಅವರಿಗೆ ಒದಗಿಸಿ

ಕೊಡುತ್ತಾನೆ. ಮಗುವಿನ ಶಿಕ್ಷಣವನ್ನು ಮುಖ್ಯವಾಗಿ ಎರಡು ಸಂಗತಿಗಳು ನಿರ್ಣಯಿಸುತ್ತವೆ. ಅವು ಯಾವವೆಂದರೆ: ಅವನ ಸಹಜ ಪ್ರವೃತ್ತಿಗಳು, ಹಾಗು ಅವನ ಜೀವನದಲ್ಲಿ ಉಂಟಾಗುವ ಅನುಭವಗಳು. ಮನುಷ್ಯನು ಹುಟ್ಟಿದಂದಿನಿಂದ ಸಾಯುವವರೆಗೆ ಪಡೆಯುವ ಪ್ರತಿಯೊಂದು ಅನುಭವವೂ ಅವನ ಶಿಕ್ಷಣಕ್ಕೆ ಸಾಧಕವಾಗುತ್ತದೆ; ಇಲ್ಲವೆ ಬಾಧಕವಾಗುತ್ತದೆ. ಹಾಗೆಯೇ ಅವನ ಸಹಜ ಪ್ರವೃತ್ತಿಗಳೂ ಅವನ ವಿಕಾಸದ ರೀತಿಯನ್ನು ನಿರ್ಣಯಿಸುತ್ತವೆ. ಆದುದರಿಂದ ಸೂಕ್ತವಾದ ಅನುಭವಗಳನ್ನು ಮಕ್ಕಳಿಗೆ ಬುದ್ಧಿಪೂರ್ವಕವಾಗಿ ಒದಗಿಸಿಕೊಟ್ಟು ಅವರ ಸಹಜಪ್ರವೃತ್ತಿಗಳು ಹಿತಕರವಾಗಿ ಪರಿಣಮಿಸುವಂತೆ ಅವುಗಳನ್ನು ಮಾರ್ಪಡಿಸುವದೇ ಶಿಕ್ಷಕನ ಮುಖ್ಯ ಕರ್ತವ್ಯವಾಗಿರುತ್ತದೆ. ಶಿಕ್ಷಣವು ನಿಜವಾಗಿ ಮಗುವಿನ ವಿಕಾಸವನ್ನು ರೂಪುಗೊಳಿಸುವ ವಿಧಾನ. ಮಗುವಿನ ವಿಕಾಸವು ಶಿಕ್ಷಣದಿಂದುಂಟಾಗುವ ಪರಿಣಾಮ.

# ೩ ಶಿಕ್ಷಣವು ಶಾಸ್ತ್ರವೂ ಅಹುದು; ಕಲೆಯೂ ಅಹುದು.

ಕಲೆ ಎಂಬುದಕ್ಕೆಲ್ಲ ಒಂದು ಶಾಸ್ತ್ರವಿದ್ದೇ ಇದೆ. ಕಲೆಯೂ ಶಾಸ್ತ್ರವೂ ಒಂದೇ ನಾಣ್ಯದ ಎರಡು ಮೈಗಳಿದ್ದಂತೆ. ಶಾಸ್ತ್ರವು ಕಲೆಯ ಹಿಂದೆ ಅಡಗಿದ ಜ್ಞಾನ. ಕಲೆಯು ಕೃತಿಯಲ್ಲಿ ವ್ಯಕ್ತವಾಗುವ ಶಾಸ್ತ್ರ. ಒಂದು ಅಮೂರ್ತ, ಇನ್ನೊಂದು ಮೂರ್ತ. ಮೂರ್ತವಾದ ಕಲೆಯ ಮರೆಯಲ್ಲಿ ಅಮೂರ್ತವಾಗಿ ಅಡಗಿದ ಕ್ರಮಕ್ಕೆ ನಾವು ಶಾಸ್ತ್ರವೆಂದೆನ್ನುತ್ತೇವೆ. ಉದಾಹರಣೆಗಾಗಿ ನಾವು ಸಂಗೀತಕಲೆಯನ್ನು ತೆಗೆದುಕೊಳ್ಳಬಹುದು. ಗಾಯಕನೊಬ್ಬನು ಮೃದುಮಧುರವಾಗಿ ಹಾಡುತ್ತಿದ್ದರೆ ಅವನು ಸಂಗೀತ ಶಾಸ್ತ್ರಕ್ಕನುಸಾರವಾಗಿ ಹಾಡುತ್ತಾನೆಂದು ಹೇಳುತ್ತೇವೆ. ಅವನು ಗಾನ ದಲ್ಲಿ ವ್ಯಕ್ತಮಾಡುತ್ತಿರುವುದು ಕಲೆಯಾದರೂ, ಆ ಕಲೆಗೆ ಆಧಾರವಾದ ತಾಳಲಯಗಳ ಕ್ರಮವು-ಸ್ವರಗಳ ಜ್ಞಾನವು—ಶಾಸ್ತ್ರವು. "**ಸೌಂದರ್ಯ, ಸಮಭಾರ, ಸಮನ್ವಯ** ಇವು ಕಲೆಯ ಲಕ್ಷಣಗಳು. **ನಿಯಮ, ಕ್ರಮ, ಪದ್ಧತಿ**— ಇವು ಶಾಸ್ತ್ರದ ಲಕ್ಷಣಗಳು. ಒಬ್ಬ ಶಿಕ್ಷಕನು ತಾನು ಕಲಿಸ ಬೇಕೆಂದಿರುವ ಪಾಠವನ್ನು ಕ್ರಮಕ್ಕೆ ಸರಿಯಾಗಿ ರಚಿಸಿರಬಹುದು. ಆದರೆ ಅವನ ಯೋಗ್ಯತೆಯನ್ನು ಆ ಕ್ರಮಬದ್ಧವಾದ ಪಾಠದ ರಚನೆ ಯಿಂದ ಮಾತ್ರ ನಿರ್ಧರಿಸದೆ ಅವನು ಆ ರಚನೆಯನ್ನು ಕೃತಿಯಲ್ಲಿ ಎಂದರೆ ಕಲಿಸುವಿಕೆಯಲ್ಲಿ ಹೇಗೆ ವ್ಯಕ್ತಮಾಡುವನೆಂಬುದರಿಂದ ನಿರ್ಧರಿಸತಕ್ಕದ್ದು" ಎಂದು ಶಿಕ್ಷಣ ತಜ್ಞರಾದ **ಹ್ಯಾವ್ಲೆ** ಎಂಬವರು ಅಭಿಪ್ರಾಯ ಪಟ್ಟಿದ್ದಾರೆ.

ಶಿಕ್ಷಣವೂ ಒಂದು ಕಲೆ. ಈ ಕಲೆಗೂ ಅದಕ್ಕೆ ಆಧಾರವಾಗಿ ಒಂದು ಶಾಸ್ತ್ರವುಂಟು. ಶಿಕ್ಷಣ ಶಾಸ್ತ್ರವು ಶಿಕ್ಷಕರ ಕಲಿಸುವಿಕೆಯಲ್ಲಿ ತೋರಿಸಿ ಕೊಂಡರೆ ಅದೇ ಕಲೆ. ಶಾಸ್ತ್ರ ಬೆಳೆದಂತೆ ಕಲೆಗೆ ಕಳೆ ಏರುತ್ತದೆ. ಶಿಕ್ಷಣ ಶಾಸ್ತ್ರದಲ್ಲಿ ಇತ್ತಿತ್ತಲಾಗಿ ಹೆಚ್ಚು ಹೆಚ್ಚು ಪರಿಣತಿಯು ತೋರಿಬರುತ್ತಿದೆ. ಅದರ ಪರಿಣಾಮವಾಗಿ ಶಿಕ್ಷಣ ಕಲೆಗೆ ಅಪೂರ್ವವಾದ ಕಾಂತಿಯುಂಟಾ ಗುತ್ತಿದೆ. ಶಿಕ್ಷಣ ಶಾಸ್ತ್ರವನ್ನು ಅಭ್ಯಸಿಸಿದ ಮಾತ್ರಕ್ಕೆ ಶಿಕ್ಷಣದ ಕಲೆ ಕೈವಶವಾಗುವದೆಂದು ತಿಳಿದುಕೊಳ್ಳುವುದು ತಪ್ಪು. ಶಾಸ್ತ್ರವನ್ನು ಮಕ್ಕಳ ಶಿಕ್ಷಣಕ್ಕಾಗಿ ಪ್ರಯೋಗಿಸುವ ರೂಢಿಯನ್ನು ಮಾಡಿಕೊಂಡಾಗಲೇ ಶಿಕ್ಷಣ ಕಲೆಯು ಕೈವಶವಾಗುವುದು. ಮೇಲಾಗಿ ಶಿಕ್ಷಣ ಕಲೆಯಲ್ಲಿ ಶಿಕ್ಷಕನ 'ಕೈವಾಡ' ವೆಂಬ ಒಂದು ಸ್ವತಂತ್ರವಾದ ಅಂಶವೂ ಸೇರಿಕೊಂಡಿರುತ್ತದೆ. ಶಿಕ್ಷಣಶಾಸ್ತ್ರವನ್ನು ಅಭ್ಯಸಿಸಿ, ಅದನ್ನು ನಿತ್ಯಶಃ ಪ್ರಯೋಗಿಸುವ ರೂಢಿ ಯನ್ನು ಪಡೆದ ಶಿಕ್ಷಕರೆಲ್ಲರೂ ಶಿಕ್ಷಣ ಕಲೆಯಲ್ಲಿ ಸಮನಾದ ಪ್ರಾವೀಣ್ಯ ವನ್ನು ಪಡೆಯಬಲ್ಲರೆಂದು ಹೇಳಲಿಕ್ಕಾಗದೇನೋ ನಿಜ; ಆದರೆ ಶೈಕ್ಷಣಿಕ ಜ್ಞಾನದಿಂದಲೂ, ಶಿಕ್ಷಣ ತತ್ತ್ವಗಳನ್ನು ಕಾರ್ಯತಃ ಪ್ರಯೋಗಿಸುವ ರೂಢಿಯಿಂದಲೂ ಹೆಚ್ಚು ಕಡಿಮೆ ಪ್ರಮಾಣದಲ್ಲಿಯೇ ಆಗಲೊಲ್ಲದೇಕೆ, ಎಲ್ಲರೂ ಶಿಕ್ಷಣ ಕಲೆಯನ್ನು ಸಾಧಿಸಬಲ್ಲರೆಂದು ನಿರ್ವಿವಾದವಾಗಿ ಹೇಳ ಬಹುದು. ಶಿಕ್ಷಣಶಾಸ್ತ್ರಕ್ಕನುಸಾರವಾಗಿ ಕಲಿಸುವ ರೂಢಿಯೇ ಶಿಕ್ಷಣ ಕಲೆಯಾಗಿ ಪರಿಣಮಿಸುವುದು.

## ೪ ಶಿಕ್ಷಣದ ಗೊತ್ತು ಗುರಿಗಳು

**ಗುರಿಯ ಅವಶ್ಯಕತೆ:—** ಯಾವುದಾದರೊಂದು ಕೆಲಸ ಮಾಡಲು ಹೊರಟ ಮನುಷ್ಯನು ತಾನು ಕೈಕೊಂಡ ಕೆಲಸದ ಗೊತ್ತು ಗುರಿಗಳನ್ನು ಮೊದಲೇ ನಿರ್ಧರಿಸಬೇಕಾಗುತ್ತದೆ. ಗುರಿಯಿಲ್ಲದೆ ಹೊರಟರೆ ಯಾವ ಕೆಲಸವೂ ಕೈಗೂಡದು. ಕುಂಬಾರನು ಇಂತಹದೊಂದು ಪಾತ್ರೆಯನ್ನು ಮಾಡಬೇಕೆಂದು, ಚಿತ್ರಗಾರನು ಇಂತಹದೊಂದು ಚಿತ್ರ ತೆಗೆಯಬೇಕೆಂದು, ಶಿಲ್ಪಿಯು ಇಂತಹದೊಂದು ಮೂರ್ತಿ ಮಾಡಬೇಕೆಂದು ಮೊದಲೇ ಕಲ್ಪಿಸಿ ಬಳಿಕ ಆ ಕೆಲಸಕ್ಕೆ ಕೈ ಹಾಕಬೇಕಾಗುತ್ತದೆ. ಇಷ್ಟೇ ಅಲ್ಲ; ಅವರು ಹೆಜ್ಜೆ ಹೆಜ್ಜೆಗೂ ತಾವು ಮಾಡಬೇಕೆಂದಿರುವ ವಸ್ತುವಿನ ಆದರ್ಶ ಸ್ವರೂಪ ವನ್ನು ಮನಶ್ಚಕ್ಷುವಿನ ಎದುರಿಗೆ ಇಟ್ಟುಕೊಂಡೇ ತಮ್ಮ ಕೆಲಸ ಸಾಗಿಸ ಬೇಕಾಗುತ್ತದೆ. ಹಾಗೆಯೇ ಶಿಕ್ಷಣ ಕಾರ್ಯವು ಯಶಸ್ವಿಯಾಗಿ ನೆರ ವೇರಬೇಕಾದರೆ ಅದರ ಗೊತ್ತುಗುರಿಗಳನ್ನು ಮುಂಚಿತವಾಗಿಯೇ ನಿರ್ಧ ರಿಸುವುದು ಅತ್ಯಾವಶ್ಯಕ. ಗೊತ್ತು ಗುರಿಗಳಿಲ್ಲದ ಶಿಕ್ಷಣವು ಎಂದಿಗೂ ಫಲಕಾರಿಯಾಗಲಾರದು.

**ಶಿಕ್ಷಣದ ಗುರಿಗಳು:—** ಶಿಕ್ಷಣದ ಗುರಿಯನ್ನು ಕುರಿತು ಬೇರೆಬೇರೆ ವಿದ್ವಾಂಸರು ಬೇರೆಬೇರೆ ಕಾಲದಲ್ಲಿ ಬೇರೆ ಬೇರೆ ಅಭಿಪ್ರಾಯಗಳನ್ನು ವ್ಯಕ್ತ ಮಾಡಿದ್ದಾರೆ. ಅವುಗಳಲ್ಲಿ ಮುಖ್ಯವಾದವುಗಳನ್ನು ಮಾತ್ರ ಇಲ್ಲಿ ವಿವೇಚಿಸುತ್ತೇವೆ.

**೧ ಉಪಜೀವನ ಸಾಧನ:—** ಶಿಕ್ಷಣವು ಉದರ ನಿರ್ವಾಹದ ಮಾರ್ಗವನ್ನು ಕಲ್ಪಿಸಿ ಕೊಡಬೇಕೆಂಬುದು ಜನಸಾಮಾನ್ಯದ ಅಭಿಪ್ರಾಯ.

ಮಕ್ಕಳು ದೊಡ್ಡವರಾಗಿ ಸಮಾಜದಲ್ಲಿ ಬದುಕಿ ಬಾಳಬೇಕಾದರೆ ಅವರಿಗೆ ಸಾಕಷ್ಟು ವ್ಯವಹಾರಜ್ಞಾನವಾಗಬೇಕು, ಅವರು ಸ್ವಾವಲಂಬಿಗಳಾಗ ಬೇಕು; ಎಂದರೆ, ಅವರು ತಮ್ಮ ಉಪಜೀವನದ ಮಾರ್ಗವನ್ನು ಕಂಡು ಕೊಳ್ಳಲು ಸಮರ್ಥರಾಗಬೇಕು. ಇದಕ್ಕೆ ಶಿಕ್ಷಣವು ಅವಶ್ಯವಾಗಿ ಬೇಕು. ಆದರೆ ಕೇವಲ ಉಪಜೀವನಕ್ಕಾಗಿ ಶಿಕ್ಷಣ ಎನ್ನುವದು ಸಂಕುಚಿತ ದೃಷ್ಟಿ. ಹಾಗೆಂದ ಪಕ್ಷದಲ್ಲಿ ಮಾನವನಿಗೂ ಪಶುವಿಗೂ ವಿಶೇಷ ಅಂತರವೇ ಉಳಿ ಯುವದಿಲ್ಲ. ಪಶುವಿನಲ್ಲಿರದ ಎಷ್ಟೋ ಶಕ್ತಿಗಳನ್ನು ದೇವರು ಮಾನವ ನಿಗೆ ದಯಪಾಲಿಸಿದ್ದಾನೆ. ಮಾನವನಿಗೆ ಬೌದ್ಧಿಕ ಶಕ್ತಿಗಳಿವೆ. ಆಧ್ಯಾ ತ್ಮಿಕ ಲಾಲಸೆಗಳಿವೆ. ಈ ಶಕ್ತಿಗಳನ್ನು ವೃದ್ಧಿಪಡಿಸುವದಕ್ಕೂ ಈ ಲಾಲಸೆ ಗಳನ್ನು ತೃಪ್ತಿಗೊಳಿಸಲಿಕ್ಕೂ ಶಿಕ್ಷಣವು ಬೇಕೆಂಬುದು ನಿರ್ವಿವಾದದ ಮಾತು. ಇದಲ್ಲದೆ ಈಗಿನ ಯಾಂತ್ರಿಕ ಯುಗದಲ್ಲಿ ಪ್ರತಿಯೊಬ್ಬನಿಗೂ ವಿರಾಮವು ಹೆಚ್ಚಾಗಿ ದೊರೆಯುತ್ತಿದೆ. ಮನುಷ್ಯನಿಗೆ ತನ್ನ ವಿರಾಮ ಕಾಲದ ಸದುಪಯೋಗವನ್ನು ಮಾಡಿಕೊಳ್ಳಲಿಕ್ಕೆ ತಕ್ಕ ಶಿಕ್ಷಣವು ಬೇಕು. ಆದುದರಿಂದ ಉಪಜೀವನ ಸಾಧನೆಯೇ ಶಿಕ್ಷಣದ ಗುರಿಯಾಗಲಾರದು.

**೨ ಜ್ಞಾನಸಂಪಾದನೆ:**—ಜ್ಞಾನಸಂಪಾದನೆಯೇ ಶಿಕ್ಷಣದ ಮುಖ್ಯ ಗುರಿ ಎಂದು ಅನೇಕರ, ಮುಖ್ಯವಾಗಿ ಶಾಲಾಶಿಕ್ಷಕರ, ಮತ. ಮಕ್ಕಳಿಗೆ ವಿಷಯ ಜ್ಞಾನವನ್ನು ಹೆಚ್ಚು ಹೆಚ್ಚಾಗಿ ಮಾಡಿಕೊಟ್ಟು ಅವರ ಬೌದ್ಧಿಕ ಶಕ್ತಿಯನ್ನು ಬಲಪಡಿಸುವದೇ ಶಿಕ್ಷಣವೆಂದು ಅವರು ತಿಳಿಯುತ್ತಾರೆ. ಬಾಲಕರ ಬೌದ್ಧಿಕ ಶಕ್ತಿಗಳನ್ನು ಬಲಪಡಿಸಲು ಅಭ್ಯಾಸ ವಿಷಯಗಳು ಅತ್ಯುತ್ತಮ ಸಾಧನಗಳಾಗಿರುವವೆಂಬ ಗ್ರಹಿಕೆಯು ರೂಢವಾಗಿದೆ. ಜ್ಞಾನ ದಿಂದ ಮಾನವನಿಗೆ ಸಾಮರ್ಥ್ಯ ಉಂಟಾಗುತ್ತದೆ. ತನ್ನ ಬುದ್ಧಿ ಬಲ ದಿಂದ ಅವನು ಪ್ರಕೃತಿಯ ಶಕ್ತಿವಿಶೇಷಗಳನ್ನು ಸ್ವಾಧೀನಪಡಿಸಿಕೊಂಡು ಅವುಗಳನ್ನು ನಿಯಂತ್ರಿಸಬಲ್ಲನು ಮತ್ತು ತನ್ನ ಸುತ್ತಲಿನ ಪರಿಸ್ಥಿತಿಯನ್ನು ತನಗೆ ಅನುಕೂಲವಾಗುವಂತೆ ಮಾರ್ಪಡಿಸಬಲ್ಲನು. ಅಲ್ಲದೆ, ವಿರಾಮ ಕಾಲದ ಸದುಪಯೋಗವನ್ನು ಮಾಡಿಕೊಳ್ಳಲು ಜ್ಞಾನವು ಬಹಳ ಸಹಾ ಯಕವಾಗುತ್ತದೆ. ಆದರೆ ಜ್ಞಾನಾರ್ಜನೆಯೇ ಶಿಕ್ಷಣದ ಮುಖ್ಯ ಗುರಿ

ಯಾಗಲಾರದು. ಹಾಗೆಂದ ಪಕ್ಷದಲ್ಲಿ ವೃತ್ತಿಶಿಕ್ಷಣವನ್ನು ಸಂಪೂರ್ಣ ವಾಗಿ ಉಪೇಕ್ಷಿಸಿದಂತಾಗುತ್ತದೆ. ಜ್ಞಾನಕ್ಕಾಗಿ ಜ್ಞಾನ ಸಂಪಾದಿಸುವ ದೆಂದರೆ ಕೃಪಣನು ಪ್ರಯೋಜನವಿಲ್ಲದೆ ಹಣವನ್ನು ಸಂಗ್ರಹಿಸಿದಂತೆಯೇ ಸರಿ. ಕೇವಲ ಜ್ಞಾನೋಪಾಸನೆಯಿಂದ ಬುದ್ಧಿಯು ಬಲಪಡುವದಾ ದರೂ ವ್ಯವಹಾರಜ್ಞಾನವೂ ನೈತಿಕ ಸಾಮರ್ಥ್ಯವೂ ಉಂಟಾಗುವವೆಂದು ನಿಶ್ಚಿತವಾಗಿ ಹೇಳಲಿಕ್ಕೆ ಬರುವದಿಲ್ಲ.

**೩ ಶೀಲ-ಸಂವರ್ಧನೆ:—** ಮಕ್ಕಳನ್ನು ಸುಶೀಲರನ್ನಾಗಿ ಮಾಡು ವದು ಶಿಕ್ಷಣದ ಗುರಿಯೆಂದು ಬಹುಕಾಲದಿಂದ ಪ್ರತಿಪಾದಿಸಲ್ಪಟ್ಟಿದೆ. ಸಮಾಜದಲ್ಲಿ ಎಲ್ಲರೂ ಸುಖಿಗಳಾಗಿರಬೇಕಾದರೆ ಸಮಾಜದ ಅಂಗವಾದ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಸ್ವಂತ ಸುಖವನ್ನಲ್ಲದೆ ಪರರ ಸುಖವನ್ನೂ ಬಯಸಬೇಕಾಗುತ್ತದೆ. ಪ್ರತಿಯೊಬ್ಬನು ಪರೋಪಕಾರಿಯೂ ದಯಾ ಪರನೂ ಸದ್ಗುಣಿಯೂ ಆಗಿರಬೇಕು. ಆದುದರಿಂದ ಶಿಕ್ಷಣಕ್ಕೆ ನೈತಿಕ ಗುರಿಯು ಅತ್ಯಾವಶ್ಯಕವಾದುದೆಂದು ಧಾರಾಳವಾಗಿ ಹೇಳಬಹುದು. ಆದರೆ ಈ ಉದ್ದೇಶವೂ ಸಹ ಮೇಲೆ ವಿವೇಚಿಸಿದ **ಉಪಜೀವನ ಸಾಧನ, ಜ್ಞಾನಸಂಪಾದನೆ** ಗುರಿಗಳಂತೆ ಏಕಪಕ್ಷೀಯವಾಗಿರುತ್ತದೆ. ಸುಶೀಲ ನಾದವನು ದೃಢಕಾಯನೂ ಜ್ಞಾನಿಯೂ ಆಗಿರುವನೆಂದು ನಿಶ್ಚಿತವಾಗಿ ಹೇಳಲಿಕ್ಕೆ ಬರುವಂತಿಲ್ಲ. ಸುಸ್ವಭಾವಿಯಾದ ಮನುಷ್ಯನಿಂದ ಸಮಾಜಕ್ಕೆ ಯಾವದೇ ತರದ ಅಹಿತವಾಗುವದಿಲ್ಲೆಂಬ ಮಾತು ನಿಜ; ಆದರೆ, ಅವನು ಸಮಾಜೋನ್ನತಿಯ ಕಾರ್ಯಗಳನ್ನು ಕೈಕೊಳ್ಳದೇ ಇರಬಹುದು. ಇದ ಲ್ಲದೆ, ದೇಶದೇಶಗಳಲ್ಲಿ, ಕಾಲಕಾಲಕ್ಕೆ ನೈತಿಕ ವಿಚಾರಗಳು ಬದಲಾಗುವ ದರಿಂದ **ಶೀಲ-ಸಂವರ್ಧನೆ** ಗುರಿಯು ಸಾಕಷ್ಟು ಯೋಗ್ಯವಾಗಿರುವದಿಲ್ಲ.

**೪. ಸರ್ವಶಕ್ತಿಗಳ ಸಮನ್ವಿತ ವಿಕಾಸ:—** ಎಲ್ಲ ಮಾನವ ಶಕ್ತಿಗಳನ್ನು ವಿಕಾಸಗೊಳಿಸುವುದು ಶಿಕ್ಷಣದ ಗುರಿಯೆಂದು ಹಲವರ ಅಭಿ ಪ್ರಾಯವಿದೆ. ಇನ್ನುಳಿದ ಗುರಿಗಳಂತೆ ಇದು ಏಕಪಕ್ಷೀಯವಾಗಿರುವದಿಲ್ಲ. ಮಗುವಿನ ವಿಕಾಸವೆಂದರೆ ಕೇವಲ ಅವನ ಶಾರೀರಿಕ, ಬೌದ್ಧಿಕ ಇಲ್ಲವೆ ನೈತಿಕ ಶಕ್ತಿಗಳ ವಿಕಾಸವಲ್ಲ; ಅದು ಅವನಲ್ಲಿದ್ದ ಎಲ್ಲ ಶಕ್ತಿಗಳ ಸಮನ್ವಿತ

ವಿಕಾಸ. ಆದರೆ ಶಿಕ್ಷಣವ ಈ ಗುರಿಯಲ್ಲಿ ಸರ್ವಶಕ್ತಿಗಳ ಸಮವಾದ ಇಲ್ಲವೆ ಸಂಪೂರ್ಣವಾದ ಬೆಳವಣಿಗೆಯಾಗಬೇಕೆಂದು ಯಾರಾದರೂ ಪ್ರತಿಪಾದಿಸಬಹುದು. ಆದರೆ ವ್ಯಕ್ತಿವ್ಯಕ್ತಿಗಳಲ್ಲಿ ಅಂತರವಿರುವದರಿಂದ ಪ್ರತಿಯೊಬ್ಬನಲ್ಲಿ ಎಲ್ಲ ಶಕ್ತಿಗಳನ್ನು ಅಷ್ಟೇ ಪ್ರಮಾಣದಲ್ಲಿ ಬೆಳೆಸುವುದು ಅಸಾಧ್ಯ. ಹಾಗೆಯೇ ಪ್ರತಿಯೊಬ್ಬನ ಜೀವಮಾನದಲ್ಲಿ ಅವನ ಪ್ರತಿಯೊಂದು ಶಕ್ತಿಯನ್ನು ಸಂಪೂರ್ಣವಾಗಿ ಬೆಳೆಸುವುದೂ ಅಸಾಧ್ಯ. ಇದಲ್ಲದೆ, ಕೆಲವು ಶಕ್ತಿಗಳನ್ನು ದುರ್ಲಕ್ಷಿಸಿ ಹಲವು ಶಕ್ತಿಗಳನ್ನು ಬೆಳೆಯಿಸುವುದು ಅಪಾಯಕರವಾಗಿರುತ್ತದೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಈ ಗುರಿಯು ಈಗ ಅಲ್ಲಗಳೆದ ಸಾಂಪ್ರದಾಯಿಕ ಶಕ್ತಿಪೋಷಣೆ ಎಂಬ ಧ್ಯೇಯವನ್ನಿಟ್ಟುಕೊಂಡ ಮನಶ್ಶಾಸ್ತ್ರದ ಆಧಾರದ ಮೇಲೆ ಪ್ರತಿಪಾದಿಸಲ್ಪಟ್ಟಿದೆ. ಮನಸ್ಸಿನ ಶಕ್ತಿಗಳಿಗೆ ಸ್ವತಂತ್ರವಾದ ಅಸ್ತಿತ್ವವದೆ ಎಂಬ ಕಲ್ಪನೆಯನ್ನು ಈ ಗುರಿಯು ಸೂಚಿಸುತ್ತದೆ. ಆದರೆ ಈ ಕಲ್ಪನೆಯನ್ನು ಆಧುನಿಕ ಮಾನಸಶಾಸ್ತ್ರಜ್ಞರು ಅಲ್ಲಗಳೆದಿದ್ದಾರೆ.

೫ **ನಾಗರಿಕತೆ:—** ಮಕ್ಕಳು ಸಮಾಜದಲ್ಲಿದ್ದುಕೊಂಡು ಜೀವಿಸಬೇಕಾದ್ದರಿಂದ ಅವರಿಗೂ ಅವರಿರುವ ಸಮಾಜಕ್ಕೂ ಹೊಂದಿಕೆಯನ್ನುಂಟು ಮಾಡುವದೇ ಶಿಕ್ಷಣದ ಗುರಿಯೆಂದು ಹೇಳುವದುಂಟು. ಮನುಷ್ಯನು ಸಮಾಜದ ಉಪಯುಕ್ತ ಅಂಗವಾಗಬೇಕಾದರೆ ಅವನಲ್ಲಿರುವ ಪಶು ಪ್ರವೃತ್ತಿಗಳು ನಿಯಂತ್ರಿಸಲ್ಪಡಬೇಕು; ಅವನು ಸ್ವಾವಲಂಬಿಯಾಗಬೇಕು; ಹಾಗು ಸಮಾಜಕ್ಕೆ ಸಂಬಂಧಿಸಿದ ತನ್ನ ಹೊಣೆಗಳನ್ನು ಅರಿಯಬೇಕು; ಎಂದರೆ, ಅವನು ಉತ್ತಮ ನಾಗರಿಕನಾಗಬೇಕು. ಆದರೆ ಶಿಕ್ಷಣ ಕಾರ್ಯದಲ್ಲಿ ಸಾಮಾಜಿಕ ಗುರಿಯನ್ನೇ ಪ್ರಾಮುಖ್ಯವಾಗಿಟ್ಟುಕೊಂಡರೆ ವ್ಯಕ್ತಿತ್ವ ವಿಕಾಸವನ್ನು ಅಲಕ್ಷಿಸಿದಂತಾಗುತ್ತದೆ. ಶಿಕ್ಷಣದ ನಿಜವಾದ ಕಾರ್ಯಕ್ರಮದಲ್ಲಿ ಸಮಾಜಕ್ಕೆ ದೊರೆಯಬೇಕಾದಷ್ಟೇ ಪ್ರಾಶಸ್ತ್ಯವು ವ್ಯಕ್ತಿಗೂ ದೊರೆಯಬೇಕು.

೬. **ವ್ಯಕ್ತಿತ್ವ ವಿಕಾಸ:—** ಮಗುವಿನ ವ್ಯಕ್ತಿತ್ವದ ಪರಿಪೂರ್ಣ ವಿಕಾಸವು ಶಿಕ್ಷಣದ ಗುರಿಯಾಗಬೇಕೆಂದು ಡಾ|| **ನನ್** ಎಂಬ ಆಧುನಿಕ

ಶಿಕ್ಷಣ ತಜ್ಞರು ಪ್ರತಿಪಾದಿಸಿದ್ದಾರೆ. ಮಾನವರೆಲ್ಲರೂ ಒಂದೇ ತೆರನಾದ ಯಂತ್ರಗಳಲ್ಲ; ಅವರಲ್ಲಿ ಅನೇಕ ವೈಯಕ್ತಿಕ ಭೇದಗಳುಂಟು. ಎಲ್ಲ ಮಾನವರಿಗೆ ಮೇಧಾಶಕ್ತಿಯನ್ನೂ ಕ್ರಿಯಾಶಕ್ತಿಯನ್ನೂ ದೇವರು ದಯ ಪಾಲಿಸಿದ್ದರೂ ಈ ಶಕ್ತಿಗಳು ಪ್ರತಿಯೊಬ್ಬ ವ್ಯಕ್ತಿಯಲ್ಲಿ ಒಂದೇ ಸಮ ನಾಗಿರುವದಿಲ್ಲ. ಈ ವೈಯಕ್ತಿಕ ಭೇದಗಳ ಮೂಲಕ ಪ್ರತಿಯೊಬ್ಬನು ಒಂದೇ ರೀತಿಯಲ್ಲಿ ವಿಕಾಸ ಹೊಂದಲಾರನು. ಇದನ್ನನುಲಕ್ಷಿಸಿ ಪ್ರತಿ ಯೊಬ್ಬ ಬಾಲಕನಿಗೆ ಅನುಕೂಲವಾದ ರೀತಿಯಲ್ಲಿ ತಾನು ಬೆಳೆಯಲು ಅವಕಾಶವನ್ನು ಕಲ್ಪಿಸಬೇಕು. ಬಾಲಕನ ಬೆಳವಣಿಗೆಗೆ ಅವಶ್ಯವಿದ್ದ ಸನ್ನಿವೇಶ-ಸಂದರ್ಭಗಳನ್ನು ಒದಿಗಿಸುವದೇ ಶಿಕ್ಷಣದ ಕಾರ್ಯ; ಶಿಕ್ಷಣದ ಗುರಿ. ಆದರೆ, ವ್ಯಕ್ತಿಯ ಪರಿಪೂರ್ಣ ವಿಕಾಸಕ್ಕೆ ಸಮಾಜದ ಸಂಪರ್ಕವು ಅತ್ಯಾವಶ್ಯಕ. ಆದುದರಿಂದ ಈ ಗುರಿಯಲ್ಲಿ ಸಾಮಾಜಿಕ (ನಾಗರಿಕತೆ) ಗುರಿಯೂ ಅಡಕವಾಗಿದೆ ಎಂದು ಹೇಳಬಹುದು; ಏಕೆಂದರೆ, ಒಮ್ಮೊಮ್ಮೆ ಸಮಾಜದ ಇಲ್ಲವೆ ದೇಶದ ಸೇವೆಗಾಗಿ ವೈಯಕ್ತಿಕ ವಿಚಾರಗಳನ್ನು ಬದಿ ಗೊತ್ತುವ ಪ್ರಸಂಗಗಳು ಉದ್ಭವಿಸುತ್ತವೆ. ಆದುದರಿಂದ ವ್ಯಕ್ತಿತ್ವ ವಿಕಾಸವೊಂದೇ ಶಿಕ್ಷಣದ ಗುರಿಯೆನ್ನುವದು ಅಷ್ಟು ಸಮಂಜಸವೆನಿಸ ಲಾರದು. ಇನ್ನು "ಸಮಾಜ ಸೇವೆಯಲ್ಲಿಯೇ ಆತ್ಮವಿಕಾಸ" ಇದೇ ಶಿಕ್ಷಣದ ಗುರಿಯೆಂದೂ ಕೆಲವರ ಮತವಿದೆ.

**ಸಮಾರೋಪಣ:—** ಶಿಕ್ಷಣದ ಗುರಿಯು ಬಹಳ ಚರ್ಚೆಗೂ ಭಿನ್ನಾಭಿಪ್ರಾಯಗಳಿಗೂ ಅವಕಾಶ ಕೊಟ್ಟಿದೆಯೆಂಬುದು ಇಲ್ಲಿಯ ವರೆಗೆ ವಿವರಿಸಿದ ಸಂಗತಿಗಳ ಮೇಲಿಂದ ಗೊತ್ತಾಗುತ್ತದೆ. ಶಿಕ್ಷಣದ ಗುರಿ ಗಳನ್ನು ನಿರೂಪಿಸಿದವರೆಲ್ಲರೂ ತಮ್ಮೆದುರಿಟ್ಟುಕೊಂಡ ಜೀವನದ ಧ್ಯೇಯಗ ಗಳಿನುಸರಿಸಿ ಬೇರೆ ಬೇರೆ ಗುರಿಗಳನ್ನು ಪ್ರತಿಪಾದಿಸಿದ್ದಾರೆ. ಆದರೆ ಶಿಕ್ಷಣದ ನಿಜವಾದ ಗುರಿಯು ಜೀವನದ ಯಾವುದೊಂದು ಭಾಗಕ್ಕೆ ಸಂಬಂಧಿಸದೆ ಅದರ ಎಲ್ಲ ಭಾಗಗಳಿಗೂ ಹೊಂದಿಕೆಯಾಗುವಷ್ಟು ವ್ಯಾಪಕ ವಾದದ್ದಿರಬೇಕು; ಅರ್ಥಾತ್, ಶಿಕ್ಷಣದ ಗುರಿಯು ಮಾನವನ ಒಟ್ಟಿ ಇರುವಿಕೆಯನ್ನು ನಿರ್ಣಯಿಸುವಷ್ಟು ವಿಶಾಲವಾಗಿರಬೇಕು. ಆದುದರಿಂದ

ಮೇಲೆ ವಿವೇಚಿಸಿದ ಯಾವುದಾದರೊಂದು ಗುರಿಯು ಶಿಕ್ಷಣದ ಸಂಪೂರ್ಣ ಸ್ವರೂಪವನ್ನು ಪೂರ್ತಿಗೊಳಿಸಲಾರದು. ಮಾನವನು ಸ್ವಾವಲಂಬಿಯಾಗಬೇಕಾದರೆ ಅವನು ತನ್ನ ಉದರ ನಿರ್ವಾಹದ ಮಾರ್ಗವನ್ನು ಕಂಡುಕೊಳ್ಳಬೇಕು. ಸರಿಯಾದ ಬುದ್ಧಿ ಸಂಸ್ಕಾರವಿರದಿದ್ದರೆ ತನ್ನನ್ನು ಬಳಸಿದ ಸನ್ನಿವೇಶವನ್ನು ತನಗನುಕೂಲವಾಗುವಂತೆ ಮಾರ್ಪಡಿಸಲಾರನು. ಅವನು ಎಷ್ಟೇ ಬುದ್ಧಿಸಂಸ್ಕಾರವನ್ನು ಪಡೆದರೂ ಅವನಲ್ಲಿ ಒಳ್ಳೆಯ ಶೀಲಸ್ವಭಾವವಿರದಿದ್ದರೆ ಹಾವಿನ ಹೆಡೆಯಲ್ಲಿ ರತ್ನವಿದ್ದಂತೆಯೇ ಸರಿ. ಮಾನವನು ಸಮಾಜದ ಅಂಗವಾದದ್ದರಿಂದ ಅವನಿಗೂ ಅವನಿರುವ ಸಮಾಜಕ್ಕೂ ಸಂಪೂರ್ಣ ಹೊಂದಿಕೆಯಾಗಬೇಕು; ಮತ್ತು ಅವನ ವ್ಯಕ್ತಿತ್ವವು ವಿಕಸಿತವಾಗದ ಹೊರತು ಅವನಿಗೂ ಮಾನವ ಪ್ರಪಂಚಕ್ಕೂ ಕಲ್ಯಾಣವಾಗಲಾರದು. ಒಟ್ಟಾರೆ, ಶಿಕ್ಷಣ ಪಡೆದ ಮಕ್ಕಳು ದೃಢಕಾಯರೂ, ಬುದ್ಧಿಶಾಲಿಗಳೂ, ಸುಶೀಲರೂ, ಸುಸಂಸ್ಕೃತರೂ, ತಮ್ಮ ಮತ್ತು ಸಮಾಜದ ಹಿತಚಿಂತಕರೂ, ಉಜ್ವಲವಾದ ವ್ಯಕ್ತಿತ್ವವುಳ್ಳವರೂ ಆಗಬೇಕು. ಇವೆಲ್ಲ ಧ್ಯೇಯಗಳು ಈಡೇರುವಂತೆ ಮಾಡುವದೇ ಶಿಕ್ಷಣದ ಆದರ್ಶದ ಗುರಿ.

# ೫ ಶಿಕ್ಷಣಕಾರ್ಯನಿರ್ವಾಹಕ ಸಂಸ್ಥೆಗಳು

ಮನುಷ್ಯನು ಹುಟ್ಟಿದಂದಿನಿಂದ ಸಾಯುವವರೆಗೆ ಅನುಭವಗಳನ್ನು ಹೊಂದುತ್ತಲೇ ಇರುತ್ತಾನೆ. ಪ್ರತಿಯೊಂದು ಅನುಭವವು ಅವನ ವಿಕಾಸ ವನ್ನು ಒಂದಿಲ್ಲೊಂದು ವಿಧವಾಗಿ ಮಾರ್ಪಡಿಸುವದರಿಂದ ಅವನು ಪ್ರತಿ ಕ್ಷಣ ಶಿಕ್ಷಣ ಹೊಂದುತ್ತಲೆ ಇರುತ್ತಾನೆ. ಮಾನವನ ಶಿಕ್ಷಣ ಕಾರ್ಯ ದಲ್ಲಿ ಮುಖ್ಯವಾಗಿ ನಾಲ್ಕು ಸಂಸ್ಥೆಗಳು ಪ್ರತ್ಯಕ್ಷವಾಗಿ ಇಲ್ಲವೆ ಅಪ್ರತ್ಯಕ್ಷ ವಾಗಿ ಭಾಗವಹಿಸುತ್ತವೆ. ಅವು ಯಾವವೆಂದರೆ:— ೧. ಮನೆ ಅಥವಾ ಕುಟುಂಬ ೨. ಸಮಾಜ ೩. ಶಾಲೆ ೪. ಸರಕಾರ.

**೧. ಮನೆ ಅಥವಾ ಕುಟುಂಬ:—** ಮಾನವನ ಬೆಳವಣಿಗೆಯ ವಿವಿಧ ಅವಸ್ಥೆಗಳಲ್ಲಿ ಶೈಶವಾವಸ್ಥೆಯೇ ಅತ್ಯಂತ ಮಹತ್ತ್ವವಾದುದು. "ಮೂರು ವರ್ಷದ ಬುದ್ಧಿ ನೂರು ವರ್ಷಗಳ ವರೆಗೆ" ಎಂಬ ಗಾದೆಯಂತೆ ಮಕ್ಕಳು ಎಳೆತನದಲ್ಲಿ ಕಲಿಯುವ ಸಂಗತಿಗಳೇ ಮುಂದೆ ಅವರು ದೊಡ್ಡವ ರಾದ ಮೇಲೆ ಎಂಥ ವ್ಯಕ್ತಿಗಳಾಗುವರೆಂಬದನ್ನು ನಿರ್ಣಯಿಸುತ್ತವೆ. ಚಿಕ್ಕ ವರಿರುವಾಗ ಮಕ್ಕಳ ಸ್ವಭಾವವು ಮೇಣದಂತೆ ಮೃದುವಾಗಿರುವದರಿಂದ ಅವರ ವಿಕಾಸವನ್ನು ನಾವು ನಮಗೆ ಸರಿದೋರಿದ ಹಾಗೆ ರೂಪುಗೊಳಿಸ ಬಹುದು.ಮಕ್ಕಳು ತಮ್ಮ ಜೀವನದ ಅತಿ ಮಹತ್ತ್ವವಾದ ಭಾಗವನ್ನು ಮನೆ ಯಲ್ಲಿಯೇ ಕಳೆಯುವದರಿಂದ ಅಲ್ಲಿ ಅವರಿಗೆ ಪ್ರಾಪ್ತವಾಗುವ ಅನುಭವ ಗಳೆಲ್ಲ ಶೈಕ್ಷಣಿಕ ದೃಷ್ಟಿಯಿಂದ ಬಹಳ ಪರಿಣಾಮಕಾರಿಯಾಗಿರುವವೆಂದು ಬೇರೆ ಹೇಳಬೇಕಾಗಿಲ್ಲ. ಮಕ್ಕಳ ವಿಕಾಸಕ್ಕೆ ಒಂದು ವಿಶಿಷ್ಟವಾದ ರೂಪವನ್ನು ಕೊಟ್ಟು ಅದರ ಕ್ರಮವನ್ನು ನಿರ್ಣಯಿಸುವದು ಮನೆ. ಆದು ದರಿಂದ ಮಾನವ ಶಿಕ್ಷಣ ಕಾರ್ಯದಲ್ಲಿ ಗೃಹಸಂಸ್ಥೆಗೆ ದೊರೆತಷ್ಟು

ಪ್ರಾಶಸ್ತ್ಯವು ಉಳಿದ ಯಾವ ಸಂಸ್ಥೆಗೂ ದೊರೆಯುವದಿಲ್ಲ. ಮಗುವು ಅಂಗಾಂಗಗಳನ್ನು ಉಪಯೋಗಿಸಲು ಆರಂಭಿಸುವದು ಮನೆಯಲ್ಲಿ; ಅದಕ್ಕೆ ತಿಳುವಳಿಕೆ ಹುಟ್ಟುವದು ಮನೆಯಲ್ಲಿ; ಅದರ ನಡತೆಯ ಏರ್ಪಾಡು ಪ್ರಾರಂಭವಾಗುವದು ಮನೆಯಲ್ಲಿ; ಅದು ಇಂದ್ರಿಯಾನುಭವಗಳನ್ನು ಹೊಂದುವದು, ಮಾತನಾಡುವದಕ್ಕೆ ಕಲಿಯುವದು, ಪರರ ಮೇಲೆ ಮಮತೆಯನ್ನು ತೋರಿಸುವದು, ಕರ್ತವ್ಯ ಜ್ಞಾನವನ್ನು ಮಾಡಿಕೊಳ್ಳುವದು, ಮುಂತಾದ ಅನೇಕ ಸಂಗತಿಗಳು ಪ್ರಾರಂಭವಾಗುವದು ಮನೆಯಲ್ಲಿಯೇ. ಆದುದರಿಂದ ಗೃಹಶಿಕ್ಷಣವು ಎಲ್ಲ ಶಿಕ್ಷಣದ ತಳಹದಿಯು. ಅದು ಒಳ್ಳೇ ಕ್ರಮವನ್ನನುಸರಿಸಿವರೆ ಮನೆಗಿಂತ ಉತ್ತಮವಾದ ಶಾಲೆಯಿಲ್ಲ; ತಂದೆ-ತಾಯಿಗಳಿಗಿಂತ ಉತ್ತಮ ಶಿಕ್ಷಕರಿಲ್ಲ.

೨. **ಸಮಾಜ**:— ಗೃಹಶಿಕ್ಷಣವು ಎಷ್ಟೇ ಮಹತ್ತ್ವದಿದ್ದರೂ ಮಕ್ಕಳ ಪೂರ್ಣ ಬೆಳವಣಿಗೆಗೆ ಅದಷ್ಟೇ ಸಾಲದು. ಮನೆಗೆ ಮಾತ್ರ ಹೊಂದಿಕೊಂಡಿರುವ ಮಕ್ಕಳ ದೃಷ್ಟಿಯು ಸಾಕಷ್ಟು ವಿಶಾಲವಾಗಲಾರದು. ಅವರು ಕೂಪಮಂಡೂಕದಂತೆ ಸಂಕುಚಿತ ದೃಷ್ಟಿಯುಳ್ಳವರಾಗುತ್ತಾರೆ. ಮಾನವನು ಸಮಾಜ ಜೀವಿಯಾದುದರಿಂದ ಮಕ್ಕಳು ದೊಡ್ಡವರಾದ ಮೇಲೆ ಸಮಾಜದಲ್ಲಿ ಬೆರೆತು ಅವರು ಅನೇಕ ಕಾರ್ಯಗಳಲ್ಲಿ ಭಾಗವಹಿಸಬೇಕಾಗುತ್ತದೆ. ಅವರು ತಂದೆ-ತಾಯಿಗಳನ್ನು, ಅಣ್ಣ-ತಮ್ಮಂದಿರನ್ನು ಮಾತ್ರ ಪ್ರೀತಿಸಲಿಕ್ಕೆ ಕಲಿತರೆ ಸಾಕಾಗದು; ಅವರು ತಮ್ಮ ಸಮಾಜ ಬಾಂಧವರನ್ನೂ ಪ್ರೀತಿಸಿ ಅವರೊಡನೆ ಸಹಕರಿಸಬೇಕಾಗುತ್ತದೆ; ಅವರ ವಿಚಾರ ಸಹಾನುಭೂತಿಗಳು ವಿಶಾಲಗೊಂಡು ಅವರಲ್ಲಿ ವಿಶ್ವ ಬಾಂಧವ್ಯದ ಭಾವನೆಯು ನೆಲೆಗೊಳ್ಳಬೇಕಾಗುತ್ತದೆ. ಆದುದರಿಂದ ಮಕ್ಕಳ ಶಿಕ್ಷಣದಲ್ಲಿ ಮನೆಗೆ ಒಂದು ಮಹತ್ತ್ವದ ಸ್ಥಾನವಿರುವಂತೆ ಸಮಾಜಕ್ಕೂ ಒಂದು ಸ್ಥಾನವಿದೆ.

೩. **ಶಾಲೆ**:— ತಮ್ಮ ಮಕ್ಕಳ ಸಂಪೂರ್ಣ ಶಿಕ್ಷಣವನ್ನು ಕೈಕೊಳ್ಳುವದು ಎಲ್ಲ ತಂದೆ-ತಾಯಿಗಳಿಗೆ ಯಾವಾಗಲೂ ಸಾಧ್ಯವಾಗುವದಿಲ್ಲ. ಅಲ್ಲದೆ, ಕೇವಲ ಗೃಹಶಿಕ್ಷಣದಿಂದ ಮಕ್ಕಳ ವಿಚಾರ, ಸಹಾನು

ಭೂತಿಗಳು ಅವರ ಸಮಾಜ ಜೀವನಕ್ಕೆ ಬೇಕಾಗುವಷ್ಟು ವಿಶಾಲವಾಗುವ ದಿಲ್ಲವೆಂದು ಹಿಂದೆ ಹೇಳಿದೆ. ಈ ಕಾರಣಗಳ ಮೂಲಕ ಶಾಲೆಯು ಏರ್ಪಡಿಸಲ್ಪಟ್ಟಿತು. ಶಾಲೆಯು ಕುಟುಂಬಕ್ಕೂ ವಿಶಾಲವಾದ ಪ್ರಪಂಚಕ್ಕೂ ಮಧ್ಯವರ್ತಿಯಾಗಿರುವದು. ಮಕ್ಕಳ ವಿಕಾಸಕ್ಕೆ ಅವಶ್ಯ ವಿದ್ದ ಅನೇಕ ಮುಖ್ಯ ಕಾರ್ಯಗಳು ಶಾಲೆಯಲ್ಲಿ ನಡೆಯುತ್ತವೆ. ಅಲ್ಲ ಅವರಿಗೆ ಅನೇಕ ಉಪಯುಕ್ತ ವಿಷಯಗಳ ಜ್ಞಾನವುಂಟಾಗುತ್ತದೆ. ಅಲ್ಲಿಯ ಶಿಸ್ತು, ವಾತಾವರಣಗಳ ಮೂಲಕ ಅವರಲ್ಲಿ ಉದಾತ್ತ ವಿಚಾರ ಗಳೂ ಭಾವನೆಗಳೂ ನೆಲೆಗೊಳ್ಳುತ್ತವೆ; ಮತ್ತು ಸಾಮೂಹಿಕ ಜೀವನದಲ್ಲಿ ಅವರಿಗಿರುವ ಹಕ್ಕು ಬಾಧ್ಯತೆಗಳ ಹಾಗು ಅವರು ಹೊರ ಬೇಕಾದ ಹೊಣೆಗಾರಿಕೆಗಳ ಕಲ್ಪನೆಯು ಅವರಿಗೆ ಉಂಟಾಗಲು ಅವ ಕಾಶವು ಅಲ್ಲಿ ದೊರೆಯುತ್ತದೆ.

೪. **ಸರಕಾರ :—** ಪ್ರಾಥಮಿಕ, ಮಾಧ್ಯಮಿಕ ಮತ್ತು ವೃತ್ತಿ ಶಿಕ್ಷಣದ ಶಾಲೆಗಳನ್ನು ಸ್ಥಾಪಿಸಿ ದೇಶದಲ್ಲಿ ಶಿಕ್ಷಣಪ್ರಸಾರ ಮಾಡುವದು ಸರಕಾರದ ಆದ್ಯ ಕರ್ತವ್ಯ. ಪ್ರಾಥಮಿಕ ಶಿಕ್ಷಣವನ್ನಾದರೂ ಒತ್ತಾಯ ಗೊಳಿಸಿ ಜನತೆಯಲ್ಲಿ ಸಾಕ್ಷರತೆಯನ್ನುಂಟುಮಾಡುವುದು; ದೇಶದಲ್ಲಿಯ ಎಲ್ಲ ಶಾಲೆಗಳ ಕೆಲಸಗಳು ಸಮರ್ಪಕವಾಗಿ ನಡೆಯುವಂತೆ ನೋಡಿ ಕೊಳ್ಳಲಿಕ್ಕೆ ಮೇಲ್ವಿಚಾರಕರನ್ನು ನೇಮಿಸುವುದು; ವಸ್ತುಸಂಗ್ರಹಾಲಯ, ವಾಚನಾಲಯ, ಕ್ರೀಡಾಂಗಣ, — ಇವೇ ಮೊದಲಾದ ಸೌಕರ್ಯ-ಸೌಲಭ್ಯಗಳನ್ನು ಒದಗಿಸಿ ಕೊಡುವುದು; ಇವೆಲ್ಲವುಗಳೂ ಸರಕಾರದ ಕೆಲಸಗಳೇ. ಆದರೆ ಸಾಕಷ್ಟು ಶಾಲೆಗಳನ್ನು ಸರಕಾರದವರೇ ಏರ್ಪಡಿ ಸುವುದು ಸಾಧ್ಯವಾಗಲಿಕ್ಕಿಲ್ಲ. ಈ ಕಾರ್ಯಕ್ಕೆ ದೇಶದಲ್ಲಿರುವ ಶ್ರೀಮಂತರು ಸ್ವಸಂತೋಷದಿಂದ ನೆರವಾಗಬೇಕು. ಇದಲ್ಲದೆ, ಸರಕಾರವು ಸ್ಥಾಪಿಸಿದ ಶಾಲೆಗಳನ್ನು ಯೋಗ್ಯರೀತಿಯಿಂದ ಉಪಯೋಗ ಮಾಡಿಕೊ ಳ್ಳುವುದು ಸಹ ಜನರು ಅರಿತು ಆಚರಿಸಬೇಕಾದ ಅತ್ಯಂತ ಮಹತ್ತ್ವದ ಹೊಣೆ.

# ೬. ಬಾಲಕ (ವಿಕಾಸದ ಮೆಟ್ಟಿಗಳು)

ಶಿಕ್ಷಣವು ಜ್ಞಾನದ ಮೂಲಕ ಮಕ್ಕಳ ವಿಕಾಸವನ್ನು ರೂಪುಗೊಳಿಸುವ ವಿಧಾನ ಎಂದು ಈ ಮೊದಲೇ ಹೇಳಿದೆ. ಈ ವಿಧಾನವು ತ್ರಿಮುಖವಾದುದೆಂದು ಡಾ| **ಜೆ. ಇ. ಎಡ್ಯಾಮ್ಸನ್ನರು** ಒಂದು ಕಡೆಗೆ ಹೇಳಿದ್ದಾರೆ. ಬಾಲಕ–ವಿಷಯ–ಶಿಕ್ಷಕ ಇವೇ ಶಿಕ್ಷಣದ ಮೂರು ಮುಖಗಳು. ಇವುಗಳಲ್ಲಿ ಕಡೆಯ ಎರಡು ಮುಖಗಳು ಮುಂದೆ ಸ್ವತಂತ್ರವಾಗಿ ವಿವರಿಸಲ್ಪಟ್ಟಿವೆ. ಮೊದಲನೆಯದನ್ನು ಕುರಿತು ಇಲ್ಲಿ ಆಲೋಚಿಸುವ.

ಮಗುವು ಈ ತ್ರಿಮುಖವಾದ ಶಿಕ್ಷಣ ವಿಧಾನದ ಮುಖ್ಯ ಮುಖವು-ಶಿಕ್ಷಣ ನಡೆಯುವದೂ ನಡೆಯಬೇಕಾದುದೂ ಬಾಲಕನಿಗಾಗಿ ಅಲ್ಲವೆ?—ಕಲಿಯುವ ವ್ಯಕ್ತಿಯ ದೃಷ್ಟಿಯಿಂದಲ್ಲವೇ? ಉಳಿದ ಎರಡು ಮುಖಗಳು ಬಾಲಕನ ವಿಕಾಸಕ್ಕೆ ನೆರವಾಗುವಂಥವು ಮಾತ್ರ—ಹಳೆಯ ಶಿಕ್ಷಣದಲ್ಲಿ ಈ ಮುಖ್ಯ ಮುಖವು ಮರೆಯಲ್ಲಿದ್ದುಕೊಂಡಿತು. ಮಗುವಿಗೆ ಸಲ್ಲಬೇಕಾದ ಪ್ರಥಮ ಸ್ಥಾನವು ಹೊಸ ಶಿಕ್ಷಣದಲ್ಲಿ ಮಗುವಿಗೆ ದೊರೆತಿದೆ. ಹೊಸ ಶಿಕ್ಷಣದ ಯೋಜನೆಗಳೆಲ್ಲ ಮಗುವನ್ನೇ ಕಣ್ಣ ಮುಂದೆ ಇಟ್ಟುಕೊಂಡಿರುವದು ಕ್ಷೇಮಕರವಾದ ಸಂಗತಿಯೇ ಸರಿ. ಶಿಕ್ಷಣ ಪ್ರಪಂಚದಲ್ಲಿ ನಮ್ಮ ಈ ಯುಗಕ್ಕೆ ಮಕ್ಕಳ ಯುಗವೆಂದು ಕರೆಯುವದುಂಟು.

ಶಿಕ್ಷಕರು ಮಗುವಿನ ದೃಷ್ಟಿಯಿಂದ ಅದರ ಶಿಕ್ಷಣವನ್ನು ಸಾಗಿಸಬೇಕಾದರೆ ಮಗುವಿನ ಮನಸ್ಸು ಹೇಗೆ ವಿಕಾಸ ಹೊಂದುತ್ತದೆಂಬುದನ್ನು ಅವರು ಅರಿತುಕೊಳ್ಳುವದು ಅತ್ಯಾವಶ್ಯಕ. ಮಗುವಿನ ಶರೀರವು ಒಂದು

ಕ್ರಮದಲ್ಲಿ ಬೆಳೆಯುತ್ತದೆಂಬುದು ನಾವೆಲ್ಲ ಕಂಡು ತಿಳಿದುಕೊಂಡ ಸಂಗತಿ. ಅದರಂತೆಯೇ ಮಗುವಿನ ಮನಸ್ಸಾದರೂ ಒಂದು ಕ್ರಮದಲ್ಲಿ ವಿಕಾಸ ಹೊಂದುತ್ತದೆ. ಶಾರೀರ ವಿಕಾಸವು ಕೆಲವೊಂದು ಅವಸ್ಥಾಂತರಗಳ ಮುಖಾಂತರವಾಗಿ ಸಾಗುವದಷ್ಟೆ. ಹಾಗೆಯೇ ಮನಸ್ಸಾದರೂ ಕೆಲವೊಂದು ಅವಸ್ಥಾಂತರಗಳ ಮೂಲಕ ಅರಳುತ್ತ ಹೋಗುತ್ತದೆ. ಶಿಕ್ಷಕನು ಮಗುವಿಗೆ ಕೊಡುವ ಶಿಕ್ಷಣವು ಬೆಳವಣಿಗೆಯ ಈ ಮಟ್ಟಗಳನ್ನು ಅನುಸರಿಸಿದರೆ ಅದು ಸ್ವಾಭಾವಿಕವಾದುದೂ ಪರಿಣಾಮಕಾರಿಯಾದುದೂ ಆಗುವದರಲ್ಲಿ ಸಂದೇಹವಿಲ್ಲ; ಇಲ್ಲದೆ ಹೋದರೆ ಬಾಲಕ ಮತ್ತು ಶಿಕ್ಷಕ ಇವರಿಬ್ಬರ ಕಾಲವೂ ಉತ್ಸಾಹವೂ ಅಪವ್ಯಯವಾದಂತೆಯೇ ಸರಿ. ಒಬ್ಬ ವ್ಯಕ್ತಿಯ ವಯಸ್ಸಿನ ಒಂದೊಂದು ಕಾಲಾವಧಿಯಲ್ಲಿ ಒಂದಾಗಲಿ ಹೆಚ್ಚಾಗಲಿ ಮಾನಸಿಕ ಪ್ರವೃತ್ತಿಗಳು ಸ್ಫುಟವಾಗುತ್ತವೆ; ಅಥವಾ ಸ್ಫುಟವಾದ ಪ್ರವೃತ್ತಿಗಳು ಬೆಳೆದು ತಮ್ಮ ಮೇರೆಯನ್ನು ಮುಟ್ಟುತ್ತವೆ. ಇಂಥ ಒಂದೊಂದು ಕಾಲಾವಧಿಗೆ ಮಾನಸಿಕ ಬೆಳವಣಿಗೆಯ ಒಂದೊಂದು ಮಟ್ಟ ಎಂದು ಹೇಳಬಹುದು; ಒಂದೊಂದು ಅವಸ್ಥೆಯೆಂದೂ ಹೇಳಬಹುದು. ಒಟ್ಟು ಇಂಥ ನಾಲ್ಕು ಮಟ್ಟಗಳನ್ನು ಡಾ. **ಅರ್ನೆಸ್ಟ ಜೋನ್ಸ** ಎಂಬ ಮನಶ್ಶಾಸ್ತ್ರಜ್ಞರು ಕಂಡುಹಿಡಿದಿದ್ದಾರೆ. ಇವು ಹಿಂದಕ್ಕೆ ಮುಂದಕ್ಕೆ ಸರಿಯದಂತೆ ಚೌಕಟ್ಟಿನಲ್ಲಿ ಕೂಡ್ರಿಸಿದ ಮಟ್ಟಗಳೆಂದು ಮಾತ್ರ ಯಾರೂ ತಿಳಿಯಲಾಗದು. ಒಂದು ಸ್ಥೂಲ ರೀತಿಯಲ್ಲಿಯೇ ಇವುಗಳನ್ನು ನಿರ್ಧರಿಸಲಾಗಿದೆ.

## ಮಗುವಿನ ಮನೋವಿಕಾಸದ ಮಟ್ಟಗಳು:—

೧. **ಶೈಶವಾವಸ್ಥೆ**:- ಮೊದಲಿನ ೫ ವರ್ಷಗಳು.

೨. **ಬಾಲ್ಯಾವಸ್ಥೆ**:— ೬ನೆಯ ವರ್ಷದಿಂದ ೧೨ನೆಯ ವರ್ಷದ ವರೆಗೆ.

೩. **ತಾರುಣ್ಯಾವಸ್ಥೆ**:— ೧೩ನೆಯ ವರ್ಷದಿಂದ ೧೮ನೆಯ ವರ್ಷದ ವರೆಗೆ.

೪. **ಪ್ರೌಢಾವಸ್ಥೆ**:— ೧೯ನೆಯ ವರ್ಷದಿಂದ ಮುಂದೆ.

ಇವುಗಳಲ್ಲಿ ಕಡೆಯ ಎರಡು ಅವಸ್ಥೆಗಳು ಅನುಕ್ರಮವಾಗಿ ಮೊದಲಿನ ಎರಡು ಅವಸ್ಥೆಗಳ ಆವರ್ತನೆಯ ಸ್ವರೂಪದಲ್ಲಿರುವವೆಂದು ಕಂಡು ಹಿಡಿಯಲಾಗಿದೆ. ಇದು ಮನಶ್ಶಾಸ್ತ್ರದ ದೃಷ್ಟಿಯಿಂದ ಅತ್ಯಂತ ಮಹತ್ತ್ವದ ಸಂಗತಿಯಾಗಿದೆ. ಈ ಅವಸ್ಥೆಗಳಲ್ಲಿ ಒಂದೊಂದರ ಲಕ್ಷಣಗಳನ್ನು ಸಂಕ್ಷೇಪವಾಗಿ ಕೆಳಗೆ ಕೊಟ್ಟಿದೆ.

೧. **ಶೈಶವಾವಸ್ಥೆ:—** ಶಿಶುವನ್ನೂ ಪ್ರೌಢನನ್ನೂ ತಾರತಮ್ಯ ದೃಷ್ಟಿಯಿಂದ ನೋಡುತ್ತ ಹೋದರೆ ಶೈಶವಾವಸ್ಥೆಯ ಎಲ್ಲ ಲಕ್ಷಣಗಳು ಒಂದೊಂದಾಗಿ ಸ್ಪಷ್ಟವಾಗಿ ಗೊತ್ತಾಗುತ್ತವೆ. ಆದರೆ ಇಲ್ಲಿ ಅವುಗಳನ್ನೆಲ್ಲ ಸವಿಸ್ತಾರವಾಗಿ ವಿಚಾರಿಸಲು ಅವಕಾಶವಿಲ್ಲದಿರುವುದರಿಂದ ಮುಖ್ಯವಾದುವುಗಳನ್ನು ಮಾತ್ರ ವಿವರಿಸುತ್ತೇವೆ.

**ಅ.** ಶಿಶುವಿಗೂ ಪ್ರೌಢನಿಗೂ ಒಡೆದುಕಾಣುವ ವ್ಯತ್ಯಾಸವು ಅವರ ಬುದ್ಧಿಮಾನದಲ್ಲಿದೆ. ಮಾನವನ ಬುದ್ಧಿಸಾಮರ್ಥ್ಯವು ಅವನು ಹುಟ್ಟಿದಂದಿನಿಂದ ದೊಡ್ಡವನಾಗುವವರೆಗೆ ಕ್ರಮೇಣ ಬೆಳೆಯುತ್ತ ಹೋಗುವದೆಂಬುದು ಎಲ್ಲರಿಗೂ ತಿಳಿದ ಮಾತು. ಶೈಶವಾವಸ್ಥೆಯಲ್ಲಿ ಬೀಜರೂಪದಲ್ಲಿದ್ದ ಬುದ್ಧಿಸಾಮರ್ಥ್ಯವು ಕ್ರಮೇಣ ಬೆಳೆದು ಸಾಧಾರಣವಾಗಿ ತಾರುಣ್ಯಾವಸ್ಥೆಯ ಕೊನೆಯಲ್ಲಿ ತನ್ನ ವಿಕಾಸದ ಮೇರೆಯನ್ನು ಮುಟ್ಟುತ್ತದೆಂದು ಪ್ರಾಯೋಗಿಕ ಮನಶ್ಶಾಸ್ತ್ರಜ್ಞರು ಬುದ್ಧಿಮಾಪನೆಗಳಿಂದ ತೋರಿಸಿಕೊಟ್ಟಿದ್ದಾರೆ.

**ಆ.** ಶಿಶುವಿನ ಚಟುವಟಿಕೆಗಳೆಲ್ಲ ಮುಖ್ಯವಾಗಿ ಸಹಜಪ್ರವೃತ್ತಿಗಳನ್ನೇ ಅನುಸರಿಸುತ್ತವೆ; ಆದರೆ ಪ್ರೌಢನ ಚಟುವಟಿಕೆಗಳಲ್ಲಿ ವಿಚಾರವೂ ವಿವೇಕವೂ ಹೆಚ್ಚಾಗಿ ಕಂಡುಬರುತ್ತವೆ.

**ಇ.** ಶಿಶುವು ಪರಾವಲಂಬಿ. ಜೀವನದ ಅನುಕೂಲತೆಗಳ ವಿಷಯದಲ್ಲಂತೂ ಅದು ಸಂಪೂರ್ಣವಾಗಿ ಎರಡನೆಯವರನ್ನೇ ಆಶ್ರಯಿಸಬೇಕಾಗುವದೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಆದರೆ ಅದರ ಪರಾವಲಂಬನವು ಮತ್ತೊಂದು ಸಂಗತಿಯಲಿ ಕಂಡುಬರುತ್ತದೆ. ಶಿಶುವಿನ

ಶರೀರ ಪೋಷಣೆಗೆ ಆಹಾರವು ಅಗತ್ಯವಿದ್ದಂತೆ ಅದರ ಭಾವಜೀವನಕ್ಕೆ ಪ್ರೇಮದ ಅಗತ್ಯವಿದೆ. ಆದುದರಿಂದ ತನ್ನ ತಾಯಿ ತಂದೆಗಳ ಮತ್ತು ಇನ್ನುಳಿದವರ ಪ್ರೇಮವು ಕೇವಲ ತನ್ನ ಸಲುವಾಗಿಯೇ ಮೀಸಲಾಗಿರ ಬೇಕೆಂದು ಅದರ ಹಂಬಲ.

**ಈ.** ಶಿಶುವು ಮುಖ್ಯವಾಗಿ ಕಲ್ಪನಾಸೃಷ್ಟಿಯಲ್ಲಿಯೇ ನಲಿಯು ತ್ತದೆ. ಅದಕ್ಕೆ ಕಲ್ಪನಾಸೃಷ್ಟಿ, ಬಾಹ್ಯಸೃಷ್ಟಿ ಇವೆರಡೂ ಒಂದೇ. ಅದ್ಭುತರಮ್ಯ ಕಥೆಗಳನ್ನು ಕೇಳಲು ಅದಕ್ಕೆ ಉತ್ಸುಕತೆ ಬಹಳ. ಇಂಥ ಕಥೆಗಳ ಮುಖ್ಯಪಾತ್ರದಲ್ಲಿ ಬೆರೆತು ಬಾಹ್ಯಪ್ರಪಂಚದಲ್ಲಿ ದೊರೆಯದ ಆನಂದವನ್ನು ಅದು ಯಾವಾಗಲೂ ಪಡೆಯುತ್ತದೆ.

**ಉ.** ಶಿಶುವಿನಲ್ಲಿ ರೂಢಿಪ್ರವೃತ್ತಿಯು ಬಲವಾಗಿರುತ್ತದೆ. ಅದಕ್ಕೆ ಅನುಕರಣಪ್ರವೃತ್ತಿಯೆಂದೂ ಹೇಳಬಹುದು. ಅದು ಮುಖ್ಯವಾಗಿ ಆಟದ ರೂಪದಲ್ಲಿ ಪ್ರಕಟವಾಗುತ್ತದೆ. ಶಿಶುವು ಹಿರಿಯರ ರೀತಿನೀತಿಗಳನ್ನೂ ಅನೇಕ ಲೌಕಿಕ ಸನ್ನಿವೇಶಗಳನ್ನೂ ನಟಿಸುವದರಲ್ಲಿಯೇ ಹೆಚ್ಚುಕಾಲ ಕಳೆ ಯುತ್ತದೆ. ಹಾಗೆ ಮಾಡುವದರಿಂದ ಅದಕ್ಕೆ ಎಷ್ಟೋ ವ್ಯವಹಾರದ ಸಂಗತಿಗಳನ್ನು ಕಲಿಯಲಿಕ್ಕೂ ಅನೇಕ ಲೌಕಿಕ ಸನ್ನಿವೇಶಗಳನ್ನು ತನ್ನ ಅಂಕಿತದಲ್ಲಿ ತಂದುಕೊಳ್ಳಲಿಕ್ಕೂ ಸಾಹಾಯ್ಯವಾಗುತ್ತದೆ.

**ಊ.** ಶಿಶುವಿಗೂ ಪ್ರೌಢನಿಗೂ ಇರುವ ಭೇದವು ಇನ್ನೊಂದು ಸಂಗತಿಯಲ್ಲಿ ಸ್ಪಷ್ಟವಾಗಿ ಕಂಡು ಬರುತ್ತದೆ. ಅದು ಅವರ ಕಾಮುಕತೆ. ಕಾಮಪ್ರವೃತ್ತಿಯು ಪ್ರೌಢನಲ್ಲಿ ಪರಿಪಕ್ವತೆಯನ್ನು ಹೊಂದಿದಂತೆ ಶಿಶುವಿ ನಲ್ಲಿ ಹೊಂದಿರುವದಿಲ್ಲ. ಶಿಶುವಿಗೆ ಕಾಮಜೀವನವೇ ಇರುವದಿಲ್ಲೆಂದು ಹೇಳುವದು ಕೆಲವು ವರ್ಷಗಳ ಹಿಂದೆ ವಾಡಿಕೆಯಾಗಿತ್ತು. ಆದರೆ ಆ ತಪ್ಪು ತಿಳಿವಳಿಕೆಯು ಈಗ ದೂರಾಗಿದೆ. ಶಿಶುವಿಗೂ ಆಳವಾದ ಕಾಮಭಾವವಿರುವದೆಂದೂ ಅದು ನಾನಾವಿಧವಾಗಿ ವ್ಯಕ್ತವಾಗುವದೆಂದೂ ಹೊಸ ಮನಶ್ಶಾಸ್ತ್ರವು ತೋರಿಸಿಕೊಟ್ಟಿದೆ.

ಒಟ್ಟಾರೆ, ಶೈಶವಾವಸ್ಥೆಯಲ್ಲಿ ಮಗುವಿನ ಬೌದ್ಧಿಕ ವಿಕಾಸಕ್ಕಿಂತ ಶಾರೀರಿಕ ಮತ್ತು ಭಾವಾತ್ಮಕ ವಿಕಾಸವಾಗುವದೇ ಹೆಚ್ಚು. ಆಟ,

ಅನುಕರಣ, ಕಲ್ಪನೆ ಇವು ಮಗುವಿನ ಜೀವನದಲ್ಲಿ ಪ್ರಧಾನವಾಗಿರುತ್ತವೆ. ಇವುಗಳನ್ನು ಲಕ್ಷದಲ್ಲಿಟ್ಟುಕೊಂಡು ಶಿಕ್ಷಕರೂ ಪಾಲಕರೂ ಸಹಾನುಭೂತಿ ಪೂರ್ವಕವಾಗಿ ಮಕ್ಕಳ ಶಿಕ್ಷಣವನ್ನು ಸಾಗಿಸಬೇಕು.

೨. **ಬಾಲ್ಯಾವಸ್ಥೆ** :— ಮಗುವಿನ ಮನೋವಿಕಾಸವು ಶಾರೀರಕ ಬೆಳವಣಿಗೆಯಂತೆ ನಿಯಮಿತವಾಗಿ ಸಾಗುವದಿಲ್ಲ. ಮನೋವಿಕಾಸದ ಗತಿಯು ಏಕರೂಪವಾಗಿ ಸಾಗದೆ ತೆರೆಯೋಪಾದಿಯಲ್ಲಿ ಸಾಗುತ್ತದೆ. ಹುಟ್ಟಿದಂದಿನಿಂದ ಮೂರು ವರ್ಷಗಳ ವರೆಗೆ ಮಗುವಿನ ಬೆಳವಣಿಗೆಯು ಭರದಿಂದ ಸಾಗುತ್ತದೆ. ಈ ಅವಧಿಗೆ **ಮುನ್ನಡೆಯ** ಕಾಲವೆಂದು ಹೇಳಬಹುದು. ಮುಂದೆ ಆರನೆಯ ಅಥವಾ ಏಳನೆಯ ವರ್ಷದ ವರೆಗೆ ವಿಕಾಸವು ಮಂದಗತಿಯುಳ್ಳದ್ದಾಗಿರುತ್ತದೆ. ಈ ಅವಧಿಯಲ್ಲಿ ಮಗುವಿಗೆ ಹಿಂದೆ ಪ್ರಾಪ್ತವಾದ ಅನುಭವವಿಶೇಷಗಳು ದೃಢಗೊಳ್ಳುವದರಿಂದ ಇದನ್ನು **ದೃಢೀಕರಣ**ದ ಅವಧಿಯೆಂದು ಕರೆಯಬಹುದು. ಈ ಅವಧಿಯು ಮುಗಿದ ಬಳಿಕ ಪುನಃ ಮುನ್ನಡೆಯ ಅವಧಿಯು ಪ್ರಾರಂಭವಾಗುತ್ತದೆ. ಈ ರೀತಿಯಾಗಿ ಮಾನವನ ವಿಕಾಸದಲ್ಲಿ ಮುನ್ನಡೆ, ದೃಢೀಕರಣ ಈ ಅವಧಿಗಳು ಒಂದರ ತರುವಾಯ ಮತ್ತೊಂದು ಬರುತ್ತ ಹೋಗುತ್ತವೆ.

**ಅ.** ಬಾಲ್ಯಾವಸ್ಥೆಯ ಉತ್ತರಾರ್ಧವು ದೃಢೀಕರಣದ ಕಾಲವಾಗಿರುವದರಿಂದ ಮಗುವಿನಲ್ಲಿ ಶಾರೀರಕ, ಮಾನಸಿಕ ಸ್ಥಿತ್ಯಂತರಗಳು ವಿಶೇಷವಾಗಿ ಕಂಡು ಬರುವದಿಲ್ಲ. ಆದುದರಿಂದ ಈ ಅವಧಿಯಲ್ಲಿ ಅವನು ಪ್ರೌಢನಂತೆ ಜಗತ್ತಿನ ಪರಿಸ್ಥಿತಿಗೆ ಹೊಂದಿಕೊಂಡಂತೆ ಕಾಣಿಸಿಕೊಳ್ಳುತ್ತಾನೆ. ಈಗ ಅವನಿಗೆ ಆಟ ಮತ್ತು ಕೆಲಸ ಇವುಗಳ ಅಂತರವು ಚನ್ನಾಗಿ ತಿಳಿಯುತ್ತದೆ. ಅವನಲ್ಲಿ ಏಕಾಗ್ರಗೊಳಿಸುವ ಹಾಗು ಆತ್ಮಸಂಯಮನದ ಸಾಮರ್ಥ್ಯಗಳು ಕಂಡು ಬರುತ್ತವೆ. ವಸ್ತು ವಸ್ತುಗಳ ಸಂಬಂಧವು ಬೆಳೆಯಹತ್ತಿ ವಸ್ತುಜ್ಞಾನವು ದೃಢಗೊಳ್ಳುತ್ತದೆ; ಆಳವಾಗಹತ್ತುತ್ತದೆ. ಪ್ರಪಂಚಜ್ಞಾನವು ವಿಸ್ತಾರ ಹೊಂದುತ್ತದೆ. ಈ ಬುದ್ಧಿಯ ಪ್ರಗತಿಯ ಜತೆಯಲ್ಲಿ ನೀತಿಜ್ಞಾನವೂ ಬೆಳೆಯುತ್ತದೆ. ಮೊದಲಿನಂತೆ ಅವನೀಗ

ಭಾವೋದ್ರೇಕವೆಂಬ ಗಾಳಿಗೆ ಒಡ್ಡಿದ ದೀಪವಲ್ಲ. ಆದರೂ ಅವನ ನೀತಿಯು ಇನ್ನೂ ಎರಡನೆಯವರನ್ನು ಅನುಸರಿಸುವ ದಾಟಿಯನ್ನೇ ಹಿಡಿದಿರುತ್ತದೆ. ಆದುದರಿಂದ ಶಿಕ್ಷಕರ ಮತ್ತು ಪಾಲಕರ ನಡೆನುಡಿಗಳ ಪರಿಣಾಮವು ಈ ಅವಸ್ಥೆಯಲ್ಲಿರುವ ಬಾಲಕರ ವಿಷಯದಲ್ಲಿ ಬಹಳ ಮಹತ್ತ್ವವಾದದ್ದು.

**ಆ.** ಈ ಅವಸ್ಥೆಯಲ್ಲಿ ಸಂಘಪ್ರವೃತ್ತಿಯು ಪರಿಪಕ್ವವಾಗುತ್ತದೆ. ಬಾಲಕನು ಹೆಚ್ಚಾಗಿ ಗೆಳೆಯರ ಬಳಗದಲ್ಲಿರಲು ಬಯಸುತ್ತಾನೆ. ಈ ಸಾಮೂಹಿಕ ಜೀವನದಿಂದ ಅವನ ಸಾಮಾಜಿಕ ವರ್ತನೆಯು ಮಾರ್ಪ-ಡಲು ಪ್ರಾರಂಭವಾಗುತ್ತದೆ. ಗೆಳೆಯರ ತಂಡದ ಸ್ತುತಿನಿಂದೆಗಳಿಗೆ ತಕ್ಕಂತೆ ಅವನ ನೀತಿ ನಡಾವಳಿಗಳು ರೂಪುಗೊಳ್ಳುತ್ತವೆ. ಬಾಲಕನಿಗೆ ತನ್ನ ತಂಡದಲ್ಲಿ ನಿಷ್ಠೆ ಬಹಳ. ತಾನು ಶಿಕ್ಷಕನಿಗೆ ಅಧೀನನಾಗಿ ನಡೆಯು-ವದರಿಂದ ತನ್ನ ತಂಡದ ಅಧೀನತೆಗೆ ಬಾಧೆಬರುವ ಸಂದರ್ಭಗಳಲ್ಲಿ ಅವನು ತಂಡದ ನಾಯಕನನ್ನೇ ಅನುಸರಿಸುತ್ತಾನೆ. ಆದುದರಿಂದ ಬಾಲಕನಿಗೂ ಶಿಕ್ಷಕನಿಗೂ ವಿರೋಧವುಂಟಾಗುವ ಸಂಭವವುಂಟು. ಅಂಥ ಪ್ರಸಂಗಗಳಲ್ಲ ಶಿಕ್ಷಕನು ವಿವೇಕದಿಂದಲೂ ಸಹಾನುಭೂತಿ-ಯಿಂದಲೂ ನಡೆದುಕೊಂಡು ಶಾಲೆಯ ವಿಷಯದಲ್ಲಿ ಮಕ್ಕಳ ತಂಡದ ಸಹಕಾರವನ್ನು ದೊರಕಿಸಲು ಪ್ರಯತ್ನಿಸಬೇಕು.

**ಇ.** ಬಾಲ್ಯಾವಸ್ಥೆಯ ಮತ್ತೊಂದು ಲಕ್ಷಣವೆಂದರೆ ಬಾಲಕನ ಹೊರನೋಟ, ಅವನ ಬಾಹ್ಯಪ್ರವರ್ತನೆ. ಈ ಅವಸ್ಥೆಯಲ್ಲಿ ಬಾಲಕನು ತನ್ನ ಮಾನಸಿಕ ಪ್ರಪಂಚ, ತನ್ನ ಅಂತರಂಗದ ವಿಷಯ ಇವುಗಳಿಗೆ ಗಮನಿಸನು; ಅವನ ನೋಟವೆಲ್ಲ ಹೊರಗಿನ ಪ್ರಪಂಚದ ಕಡೆಗೇ. ಲೌಕಿಕ ವಿಷಯಗಳಲ್ಲಿ ಅವನಿಗೆ ಆಸಕ್ತಿ ಬಹಳ. ತನ್ನನ್ನು ಬಳಸಿದ ಸನ್ನಿವೇಶ-ಪರಿಸ್ಥಿತಿಗಳನ್ನು ತಿಳಿದುಕೊಳ್ಳಲು ಅವನು ಅಧಿಕವಾದ ಕುತೂಹಲವನ್ನು ತೋರಿಸುತ್ತಾನೆ. ಅವನ ಈ ಆಸಕ್ತಿ-ಅಭಿರುಚಿಗಳು ಮುಖ್ಯವಾಗಿ ಅವನ ಸಾಮೂಹಿಕ ಆಟಪಾಟಗಳಲ್ಲಿ ಕಂಡುಬರುತ್ತವೆ.

ಸಾರಾಂಶ, ಈ ಅವಸ್ಥೆಯಲ್ಲಿ ಮುಖ್ಯವಾಗಿ ಮಗುವಿನ ಸಾಮಾಜಿಕ ಜೀವನ, ಸಾಮಾಜಿಕ ವರ್ತನೆ ಇವುಗಳಲ್ಲಿ ಹೆಚ್ಚಾದ ಮಾರ್ಪಾಟು ಗಳುಂಟಾಗುತ್ತವೆ. ಬಾಲಕನ ಸಂಘಪ್ರವೃತ್ತಿಯನ್ನೂ ಸಾಂಘಿಕ ಅನು ಭವಗಳನ್ನೂ ಶಿಕ್ಷಕನು ಯೋಗ್ಯರೀತಿಯಿಂದ ಉಪಯೋಗಿಸಿದರೆ ಸಾಮಾಜಿಕ ದೃಷ್ಟಿಯಿಂದ ಅಗತ್ಯವಾದ ಹಾಗು ಉಪಯುಕ್ತವಾದ ರೀತಿ ನೀತಿಗಳೂ ನಡೆನುಡಿಗಳೂ ಬಾಲಕನಲ್ಲಿ ನೆಲೆಸುವವೆಂಬುದರಲ್ಲಿ ಸಂದೇಹ ವಿಲ್ಲ.

**೩. ತಾರುಣ್ಯಾವಸ್ಥೆ:—** ತಾತ್ವಿಕ ದೃಷ್ಟಿಯಿಂದ ವಿಚಾರಿಸಿ ದರೆ ತಾರುಣ್ಯಾವಸ್ಥೆಯು ಶೈಶವಾವಸ್ಥೆಯ ಒಂದು ತೆರನಾದ ಪುನರಾ ವರ್ತನೆಯೇ ಆಗಿದೆ. ಬಾಲ್ಯಾವಸ್ಥೆಯಲ್ಲಿ ತೋರಿಬರುವ ಸ್ಥಿರತೆಯು ಈ ಅವಸ್ಥೆಯಲ್ಲಿ ಕಾಣಿಸಿಕೊಳ್ಳುವದಿಲ್ಲ. ಶಿಶುವಿನಂತೆ ತರುಣನಿಗೂ ಬಾಹ್ಯಪ್ರಪಂಚವು ವಿಲಕ್ಷಣವಾಗಿ ತೋರುತ್ತದೆ. ಈ ಪ್ರಪಂಚದಲ್ಲಿ ಅವನಿಗೆ ಸ್ಥಾನಮಾನಗಳು ಸಿಕ್ಕುವುದಿಲ್ಲ. ಬಾಲ್ಯಾವಸ್ಥೆಯಲ್ಲಿ ತಾನು ಆಸ್ಥೆಯಿಂದ ಕೈಕೊಂಡ ಚಟುವಟಿಕೆಗಳ—ಆಟಪಾಟಗಳ—ಮರ್ಮವು ಅವನಿಗೆ ಈಗ ತಿಳಿಯಬುವದಿಲ್ಲ. ಸಾಂಘಿಕ ಜೀವನದಲ್ಲಿ ಅವನಿಗೆ ಮೊದಲಿದ್ದ ಆಸಕ್ತಿ-ಅಭಿರುಚಿಗಳು ಕಡಿಮೆಯಾಗಿ ಅವನಲ್ಲಿ ಒಂದು ಬಗೆಯ ಒಳ ನೋಟವು ತಲೆದೋರುವದು. ಒಟ್ಟಿನಲ್ಲಿ ಅವನ ಬುದ್ಧಿಯು ಭ್ರಮಣ ವಾಗುತ್ತದೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

**ಅ.** ಶೈಶವಾವಸ್ಥೆಯಲ್ಲಿ ಕಾಣಿಸಿಕೊಳ್ಳುವ ಲಕ್ಷಣಗಳು ತಾರುಣ್ಯಾವಸ್ಥೆಯಲ್ಲಿಯೂ ಒಂದು ಪರ್ಯಾಯದಿಂದ ಪುನಃ ತೋರಿ ಬರುತ್ತವೆಂಬ ಮಾತನ್ನು ಮೇಲೆ ಹೇಳಿದೆ. ಈ ಪುನರಾವರ್ತನೆಯು ತರುಣನ ಭಾವಪ್ರಧಾನ ಜೀವನದಲ್ಲಿ ಕಂಡುಬರುತ್ತದೆ. ಶಿಶುವಿನಂತೆ ತರುಣನೂ ಭಾವೋದ್ರೇಕವೆಂಬ ಬಿರುಗಾಳಿಗೆ ಆಹುತಿಯಾಗುತ್ತಾನೆ. ಈ ಅವಸ್ಥೆಯಲ್ಲಿ ಬುದ್ಧಿಯು ಬಲಿತು ತನ್ನ ಸೀಮೆಯನ್ನು ಮುಟ್ಟುವ ದೆನ್ನೋ ನಿಜ; ಆದರೆ ಅದು ಪ್ರಾಮುಖ್ಯವಾದುದಲ್ಲ. ಮುಖ್ಯವಾದುದು ತರುಣನ ಭಾವಪ್ರಧಾನ ಜೀವನ.

ಆ. ಶಿಶುವಿನಂತೆ ತರುಣನೂ ಕಲ್ಪನಾ ಸಾಮ್ರಾಜ್ಯದಲ್ಲಿ ನಲಿಯುತ್ತಾನೆ. ತಾನು ಬಯಸಿದ ನಚ್ಚುಮೆಚ್ಚಿನ ವಸ್ತುಗಳೂ ಸ್ಥಾನಮಾನಗಳೂ ಬಾಹ್ಯಪ್ರಪಂಚದಲ್ಲಿ ಸಿಕ್ಕುವುದು ದುರ್ಲಭವೆಂದು ಕಂಡುಕೊಂಡು ಅವುಗಳನ್ನು ದೊರಕಿಸಲಿಕ್ಕೆ ಅವನು ಕಲ್ಪನಾಸಾಮ್ರಾಜ್ಯಕ್ಕೆ ತೆರಳುತ್ತಾನೆ.

ಇ. ಬಾಲ್ಯಾವಸ್ಥೆಯಲ್ಲಿ ಸುಪ್ತವಾಗಿದ್ದುಕೊಂಡ ಕಾಮಪ್ರವೃತ್ತಿಯು ಈಗ ವ್ಯೆದೋರುವದು, ಬಲಪಡುವದು. ಈ ಪ್ರವೃತ್ತಿಯು ತರುಣನ ಪ್ರತಿಯೊಂದು ಜೀವನಾಳದಲ್ಲಿ ಪ್ರವಾಹದಂತೆ ಎಡಬಿಡದೆ ಹರಿದಾಡುವದರಿಂದ ಅವನ ಬುದ್ಧಿ ಭ್ರಮಣವಾಗುವದು ಏನೂ ಆಶ್ಚರ್ಯವಲ್ಲ. ಈ ಮಹತ್ತ್ವದ ಪ್ರವೃತ್ತಿಯನ್ನು ಸದ್ವೃತ್ತಿಯನ್ನಾಗಿ ಮಾಡುವದು ಶಿಕ್ಷಕನ ಜಾಣತನ, ಸಹಾನುಭೂತಿ, ಅನುಭವ ಇವುಗಳನ್ನೇ ಅವಲಂಬಿಸಿದೆ.

ಈ. ಶಿಶುವು ಪರಾವಲಂಬಿಯೆಂದು ಹಿಂದೆ ಹೇಳಿದೆ. ಅದರಂತೆ ತರುಣನೂ ಪರಾವಲಂಬಿ. ಶಿಶುವು ತಂದೆ ತಾಯಿಗಳನ್ನು ಆಶ್ರಯಿಸುವಂತೆ ತರುಣನು ಪ್ರಪಂಚದ ವಿಭೂತಿಗಳನ್ನೂ ಇತಿಹಾಸ-ಸಾಹಿತ್ಯಗಳ ವೀರಧೀರ ನಾಯಕ-ನಾಯಿಕೆಯರನ್ನೂ ಆಶ್ರಯಿಸುತ್ತಾನೆ. ಎಷ್ಟೋ ಸಾರೆ ತರುಣ ಮಕ್ಕಳು ತಮ್ಮ ಶಿಕ್ಷಕ-ಶಿಕ್ಷಿಕೆಯರನ್ನೇ ಆದರ್ಶ ನಾಯಕ-ನಾಯಿಕೆಯರೆಂದು ಭಾವಿಸಿ ಅವರನ್ನು ಗೌರವಿಸುವದುಂಟು. ಆದುದರಿಂದ ಆದರ್ಶ ಜೀವಿಗಳ ಚರಿತ್ರೆಗಳನ್ನು ಓದಿ ಅವರನ್ನು ಮೆಚ್ಚುವಂತೆ ಶಿಕ್ಷಕನು ಮಕ್ಕಳನ್ನು ಪ್ರೋತ್ಸಾಹಿಸಬೇಕಲ್ಲದೆ ತನ್ನ ನಡೆನುಡಿ, ಆಚಾರವಿಚಾರ ಇವು ಅನುಕರಣೀಯವಾಗಿರುವಂತೆಯೂ ಎಚ್ಚರಪಡತಕ್ಕದ್ದು.

ಒಟ್ಟಿನಲ್ಲಿ, ತಾರುಣ್ಯಾವಸ್ಥೆಯು ಜೀವನದ ಒಂದು ಆಂದೋಲನದ ಕಾಲ. ಈ ಅವಸ್ಥೆಯಲ್ಲಿದ್ದ ಮಕ್ಕಳ ಜೀವನದಲ್ಲಿ ಪ್ರಚಂಡವಾದ ಅಲ್ಲೋಲಕಲ್ಲೋಲಗಳುಂಟಾಗುತ್ತವೆ. ಕಾಮುಪ್ರವೃತ್ತಿಯು ಬಲಗೊಳ್ಳುವದರಿಂದ ಅಂತರಂಗದಲ್ಲಿ ಒಂದು ಬಗೆಯ ಹೋರಾಟವು ಪ್ರಾರಂಭ

ವಾಗಿ ಮಕ್ಕಳು ಮಾನಸಿಕ ಶಾಂತಿಯನ್ನು ಕಳೆದುಕೊಳ್ಳುತ್ತಾರೆ. ಆದುದ ರಿಂದ ತಂದೆ ತಾಯಿಗಳೂ ಶಿಕ್ಷಕರೂ ತಾವು ತಾರುಣ್ಯಾವಸ್ಥೆಯಲ್ಲಿ ಅನುಭವಿಸಿದ ಸಂಗತಿಗಳನ್ನು ನೆನಪಿಗೆ ತಂದುಕೊಂಡು ತರುಣ ಮಕ್ಕಳನ್ನು ಅತ್ಯಂತ ಸಹಾನುಭೂತಿಪೂರ್ವಕವಾಗಿ ಮಿತ್ರರಂತೆ ನಡೆಯಿಸಿಕೊಳ್ಳ ತಕ್ಕದ್ದು.

೪. **ಪ್ರೌಢಾವಸ್ಥೆ :—** ಪ್ರೌಢಾವಸ್ಥೆಯು ಪ್ರಶಾಂತವಾದ ಕಾಲ. ಹಿಂದಿನ ಅವಸ್ಥೆಯಲ್ಲಿ ತೋರಿದ ಮಾನಸಿಕ ಆಂದೋಲನೆಗಳೆಲ್ಲ ಈಗ ಇಲ್ಲದಂತಾಗುತ್ತವೆ. ತರುಣನು ಈಗ ವಿಚಾರವಂತನೂ ಆತ್ಮ ಸಂಯಮಿಯೂ ಆಗಿ ಜೀವನದಲ್ಲಿ ಆಗಾಗ್ಗೆ ಉದ್ಭವಿಸುವ ಕಷ್ಟನಷ್ಟ ಗಳನ್ನು ಎದುರಿಸಲು ಸಮರ್ಥನಾಗುತ್ತಾನೆ. ಅವನ ಕಲ್ಪನಾಸೃಷ್ಟಿಯು ಕನಸಿನಂತೆ ಮಾಯವಾಗಿ ಹೋಗುವದರಿಂದ ಅವನು ಬಾಹ್ಯಸೃಷ್ಟಿಯ ಕೂಡ ಹೆಚ್ಚು ಹೆಚ್ಚು ಸಂಬಂಧವನ್ನು ಬೆಳೆಸುತ್ತಾನೆ. ಅವನು ತನ್ನ ಗುರಿಯನ್ನು ಗೊತ್ತುಮಾಡಿಕೊಂಡು ಅದರಂತೆ ವರ್ತಿಸಲು ಪ್ರಯತ್ನಿ ಸುತ್ತಾನೆ, ಮತ್ತು ಯಾವದಾದರೊಂದು ಉದ್ಯೋಗವನ್ನು ಕೈಕೊಂಡು ತನ್ನ ಜೀವನವನ್ನು ಸಾಗಿಸುತ್ತಾನೆ.

ಮಾನವನ ಮನಸ್ಸು ವಿಕಾಸಹೊಂದುವದು ಹೀಗೆ. ಈ ಸ್ವಾಭಾ ವಿಕವಾದ ಕ್ರಮದಲ್ಲಿಯೇ ಅವನ ಶಿಕ್ಷಣವು ಸಾಗಬೇಕು. ಎಂದರೇನೇ ಅದು ಫಲಕಾರಿಯಾದ ಶಿಕ್ಷಣವಿಧಾನವಾಗಿ ಪರಿಣಮಿಸುವದು.

# ೭ ವಿಷಯ (ವಿಷಯ ಪತ್ರಿಕೆ)

ಜ್ಞಾನವು ಶಿಕ್ಷಣವಿಧಾನದ ಎರಡನೆಯ ಮುಖವು. ಅದು ಮಕ್ಕಳನ್ನು ವಿಕಾಸಗೊಳಿಸುವ ಸಾಧನ. ಜಗತ್ತಿನ ಜ್ಞಾನಭಾಂಡಾರವು ಅಪಾರವಾದುದು. ಮಕ್ಕಳು ತಮ್ಮ ಜೀವಮಾನವನ್ನೆಲ್ಲ ಜ್ಞಾನಾರ್ಜನೆಯಲ್ಲಿಯೇ ಕಳೆದರೂ ಅವರು ಅದರ ತಿಲಾಂಶಕ್ಕಿಂತ ಹೆಚ್ಚಿಗೆ ಕಲಿಯಲಾರರು. ಆದುದರಿಂದ ಶಾಲೆಯಲ್ಲಿ ಮಕ್ಕಳಿಗೆ ಕಲಿಸುವ ವಿಷಯಗಳನ್ನು ಆರಿಸುವದು ಸುಲಭವಲ್ಲ. ಹಿಂದಿನವರು ಅಭ್ಯಾಸ ವಿಷಯಗಳನ್ನು ಆರಿಸುವಾಗ ಹಳೆಯ ಮನಶ್ಶಾಸ್ತ್ರವನ್ನು ಆಧಾರವನ್ನಾಗಿಟ್ಟುಕೊಂಡಿದ್ದರು. ಮನಸ್ಸೆಂಬುದು ವಿವೇಚನಾಶಕ್ತಿ, ಸ್ಮರಣಶಕ್ತಿ, ಅವಧಾನಶಕ್ತಿ, ಕಲ್ಪನಾಶಕ್ತಿ ಮುಂತಾದ ಅನೇಕ ಸ್ವತಂತ್ರ ಶಕ್ತಿಗಳ ಹೊರೆಯೆಂದೂ ಈ ಶಕ್ತಿಗಳನ್ನು ಹಲವು ಅಭ್ಯಾಸ ವಿಷಯಗಳ ಮೂಲಕ ಬಲಪಡಿಸಬೇಕೆಂದೂ ಅವರು ತಿಳಿದಿದ್ದರು. ವಿವೇಚನಾಶಕ್ತಿಯನ್ನು ಗಣಿತದಿಂದ, ಸ್ಮರಣಶಕ್ತಿಯನ್ನು ಭಾಷೆ ಇತಿಹಾಸಗಳಿಂದ, ನಿರೀಕ್ಷಣಶಕ್ತಿಯನ್ನು ಪ್ರಕೃತಿ ವಿಜ್ಞಾನದಿಂದ, ಹೀಗೆ ಬೇರೆ ಬೇರೆ ಶಕ್ತಿಗಳನ್ನು ಬೇರೆ ಬೇರೆ ವಿಷಯಗಳ ಮೂಲಕ ಬಲಪಡಿಸಬೇಕೆಂದು ಅವರ ಅಭಿಪ್ರಾಯವಿತ್ತು. ಆದರೆ ಈಗ ಹಳೆಯ ಮನಶ್ಶಾಸ್ತ್ರದ ತತ್ತ್ವಗಳು ಸಂಪೂರ್ಣವಾಗಿ ನಿಷೇಧಿಸಲ್ಪಟ್ಟಿವೆ. ಮಗುವು ಯಾವದೊಂದು ವಿಷಯವನ್ನು ಕಲಿಯುತ್ತಿರುವಾಗ ಮನಸ್ಸಿನ ಒಂದು ವಿಶಿಷ್ಟವಾದ ಶಕ್ತಿಯು ಸ್ವತಂತ್ರವಾಗಿ ಕೆಲಸಮಾಡುತ್ತಿರುವುದಿಲ್ಲ. ಕೆಲಸ ಮಾಡುತ್ತಿರುವದು ಇಡಿ ಮನಸ್ಸೇ. ಆದರೆ ಒಂದೊಂದು ವಿಷಯವನ್ನು ಕಲಿಯುವಾಗ ಮನಸ್ಸಿನ ಒಂದೊಂದು ವಿಶಿಷ್ಟವಾದ ಕ್ರಿಯೆಯು ಪ್ರಕಟವಾಗಬಹುದು. ನಾವು ವಾಡಿಕೆಯಾಗಿ 'ಶಕ್ತಿ' ಎಂದು ಕರೆಯುವದು ಮನಸ್ಸಿನ ಈ ವಿಶಿಷ್ಟವಾದ ಕ್ರಿಯೆಯೇ. ವಿಷಯ ಪತ್ರಿಕೆ (curriculum) ಯನ್ನು ತಯಾರಿ

ಸುವಾಗ ಮುಖ್ಯವಾಗಿ ಎರಡು ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕು. ಅವು ಯಾವವೆಂದರೆ– ೧ ಬಾಲಕ, ೨ ಸಮಾಜ.

೧. **ಬಾಲಕ :—** ಅಭ್ಯಾಸ ವಿಷಯಗಳು ಬಾಲಕನ ವಿಕಾಸಕ್ಕೆ ಸಹಾಯಕವಾಗಿರಬೇಕು; ಅವನ ಸಹಜವಾದ ಒಲವು ಆಸಕ್ತಿ ಆಕಾಂಕ್ಷೆಗಳಿಗೆ ಅನುಗುಣವಾಗಿರಬೇಕು; ಮತ್ತು ಅವನ ವಿಕಾಸದ ವಿವಿಧ ಮಟ್ಟಗಳಿಗೆ ಸುಸಂಗತವಾಗಿರಬೇಕು.

೨. **ಸಮಾಜ :—** ಬಾಲಕನು ಸಮಾಜದಲ್ಲಿದ್ದುಕೊಂಡು ಜೀವಿಸಬೇಕಾದುದರಿಂದ ತನ್ನ ಸಮಾಜ ಜೀವನದಲ್ಲಿ ಪ್ರಯೋಜನಕ್ಕೆ ಬರುವ ವಿಷಯಗಳನ್ನು ಅವನು ತಿಳಿದುಕೊಳ್ಳುವದು ಅಗತ್ಯ. ಅಭ್ಯಾಸ ವಿಷಯಗಳು ಬಾಲಕನ ಜೀವನೋಪಾಯಕ್ಕೆ ಬೇಕಾದ ಸಾಧನಗಳನ್ನು ಕಲ್ಪಿಸಿಕೊಡಬೇಕು; ಅವನಿಗೆ ಯೋಗ್ಯವಾದ ಬುದ್ಧಿಸಂಸ್ಕಾರಗಳನ್ನು ಕೊಟ್ಟು ಅವನನ್ನು ಸುಸಂಸ್ಕೃತನನ್ನಾಗಿ ಮಾಡಬೇಕು; ಹಾಗು ಅವನು ಸಮಾಜ ಪ್ರಪಂಚದ ಸಂಬಂಧಗಳನ್ನರಿತುಕೊಂಡು ಅದಕ್ಕೆ ಸರಿಯಾಗಿ ಹೊಂದಿಕೊಂಡಿರಲಿಕ್ಕೆ ಬೇಕಾದ ಶಕ್ತಿವಿಶೇಷಗಳನ್ನುಂಟುಮಾಡಬೇಕು. ಆದರೆ ವಿಷಯಪತ್ರಿಕೆಯನ್ನು ಸಿದ್ಧಗೊಳಿಸುವಾಗ ಬಾಲಕನ ವ್ಯಕ್ತಿತ್ವ ವಿಕಾಸಕ್ಕಿಂತ ಅವನ ಸಾಮಾಜಿಕ ಜೀವನಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡಕೂಡದು.

## ೮ ಶಿಕ್ಷಕ

ಶಿಕ್ಷಕನೂ ಶಿಕ್ಷಣ ವಿಧಾನದ ಒಂದು ಮುಖ್ಯವಾದ ಮುಖವೆಂಬುದು ನಿರ್ವಿವಾದ. ವಿಷಯ ಪತ್ರಿಕೆ, ವ್ಯವಸ್ಥೆ, ಉಪಕರಣ ಇವೆಲ್ಲವು ಎಷ್ಟೇ ಮಹತ್ತ್ವದವಿರಬಹುದು; ಆದರೆ ಅವುಗಳಲ್ಲೆಲ್ಲ ಜೀವಕಳೆ ತುಂಬುವ ಶಿಕ್ಷಕನ ವ್ಯಕ್ತಿತ್ವವೊಂದಿಲ್ಲದಿದ್ದರೆ ಅವು ಪ್ರಯೋಜನಕ್ಕೆ ಬರಲಾರವು. ಶಿಕ್ಷಕನ ವ್ಯಕ್ತಿತ್ವದಿಂದ ಬಾಲಕನ ವ್ಯಕ್ತಿತ್ವದ ಮೇಲೆ ಉಂಟಾಗುವ ಪರಿಣಾಮವು ಉಳಿದ ಯಾವ ಸಂಗತಿಯಿಂದಲೂ ಆಗಲಾರದು. ಮಕ್ಕಳು ಶಾಲಾವಿಷಯಗಳನ್ನು ಮನನಮಾಡಿ ಪಡೆಯುವ ನೈಪುಣ್ಯಕ್ಕಿಂತ ಆ ವಿಷಯಗಳ ಬಗ್ಗೆ ಅವರು ತಳೆಯುವ ಧೋರಣವು ಮಹತ್ತ್ವವಾದುದು. ಆದರೆ ಅದನ್ನು ಶಿಕ್ಷಕನೊಡನೆ ಇರುವ ಅವರ ಸಂಬಂಧವು ನಿರ್ಣಯಿಸುವದು. ಆದುದರಿಂದ ಶಿಕ್ಷಣ ಪ್ರಪಂಚದಲ್ಲಿ ಶಿಕ್ಷಕನಿಗೂ ಉಚ್ಚಸ್ಥಾನವಿದೆ.

**ಶಿಕ್ಷಕನ ವ್ಯಕ್ತಿತ್ವ :—** ವ್ಯಕ್ತಿತ್ವವೆಂದರೇನೆಂಬುದನ್ನು ಸ್ಪಷ್ಟವಾಗಿ ನಿರೂಪಿಸುವದು ಅಸಾಧ್ಯ. ಅದು ಹಲವು ಗುಣವಿಶೇಷಗಳ ಸಮಾಗಮದಿಂದ ವ್ಯಕ್ತಿಯಲ್ಲಿ ಉಂಟಾಗುವ ಒಂದು ತರದ ವರ್ಚಸ್ಸು ಎಂದು ಸ್ಥೂಲವಾಗಿ ಹೇಳಬಹುದು. ಆದರ್ಶ ಶಿಕ್ಷಕನಲ್ಲಿ ಸಾಮಾನ್ಯವಾಗಿ ಕಂಡು ಬರುವ ಹಲವು ಮುಖ್ಯವಾದ ಗುಣವಿಶೇಷಗಳನ್ನು ಕೆಳಗೆ ವಿವರಿಸಿದೆ.

೧ ಆರೋಗ್ಯ
೨ ವೈಯಕ್ತಿಕ ಸ್ವಚ್ಛತೆ, ಅಚ್ಚುಕಟ್ಟುತನ
೩ ಸ್ವರ-ಮಾಧುರ್ಯ
೪ ಪಾಂಡಿತ್ಯ ( ವಿಷಯವಿಜ್ಞಾನ )
೫ ಕಲಿಸುವ ಚಾತುರ್ಯ
೬ ಭಾಷಾ ಪ್ರಭುತ್ವ
೭ ಹಾಸ್ಯಭಾವ
೮ ವಿವೇಕ, ವ್ಯವಹಾರ ಚಾತುರ್ಯ
೯ ನ್ಯಾಯಶೀಲತೆ
೧೦ ಪರಿಸ್ಥಿತಿಗೆ ಹೊಂದಿಕೊಂಡು ಹೋಗುವ ಜಾಣ್ಮೆ
೧೧ ಆಳಿಕೆಯ ಸಾಮರ್ಥ್ಯ
೧೨ ಉತ್ಸಾಹ
೧೩ ಜಾಗರೂಕತೆ (ಕರ್ತವ್ಯದಕ್ಷತೆ)
೧೪ ಸಹಾನುಭೂತಿ-ಸಹಕಾರ
೧೫ ಆತ್ಮವಿಶ್ವಾಸ
೧೬ ಆತ್ಮಸಂಯಮನ
೧೭ ತಾಳ್ಮೆ
೧೮ ಸರಳತೆ
೧೯ ನಿಯಮಿತತನ
೨೦ ತನ್ನ ವೃತ್ತಿಯಲ್ಲಿ ಆಸ್ಥೆ
೨೧ ಮಕ್ಕಳ ಮೇಲೆ ಮಮತೆ
೨೨ ಧೈರ್ಯ-ಸ್ಥೈರ್ಯ
೨೩ ಆನಂದವೃತ್ತಿ
೨೪ ಉದ್ಯೋಗಶೀಲತೆ
೨೫ ಗಾಂಭೀರ್ಯ
೨೬ ಶಿಷ್ಟತೆ
೨೭ ಮುಂದಾಳುತನ
೨೮ ಶಾಲಾಭಿಮಾನ
೨೯ ಸ್ವಾಭಿಮಾನ-ಸ್ವಾವಲಂಬನ
೩೦ ಸಮಾಜಸೇವಾಸಕ್ತಿ

**ಶಿಕ್ಷಕ-ಬಾಲಕರ ಸಂಬಂಧ:—** ಮಕ್ಕಳು ವಿಶೇಷವಾಗಿ ಶಿಕ್ಷಕನ ಆಚಾರ ವಿಚಾರಗಳನ್ನೇ ಅನುಕರಿಸುವರು. ಆದುದರಿಂದ ಶಿಕ್ಷಕನ ಆಚಾರ ವಿಚಾರಗಳು ಅತ್ಯಂತ ಅನುಕರಣೀಯವಾಗಿರಬೇಕು. ಅವನು ಮಕ್ಕಳಲ್ಲಿ ನೆಲೆಸಬೇಕಾದ ಸದ್ಗುಣಗಳ ಮೂರ್ತಸ್ವರೂಪನಾಗಿರಬೇಕು. ಶಿಕ್ಷಕನು ತಾನು ನುಡಿದಂತೆ ನಡೆಯದಿದ್ದರೆ ಅವನ ಬೋಧನೆಯೆಲ್ಲ ನಿರರ್ಥಕ ವಾಗುವದೆಂಬುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಮಕ್ಕಳೊಂದಿಗೆ ನಡೆದು ಕೊಳ್ಳುವಾಗ ಅವನು ಯಾವಾಗಲೂ ಮಮತೆ, ಸಹಾನುಭೂತಿ, ಸಹ ಕಾರಗಳನ್ನು ತೋರಿಸಬೇಕು. ಶಾಲೆಯ ಎಲ್ಲ ಚಟುವಟಿಕೆಗಳಲ್ಲಿ, ವಿಶೇಷವಾಗಿ ವಿಷಯ ಪತ್ರಿಕೆಯನ್ನುಳಿದ ಚಟುವಟಿಕೆಗಳಲ್ಲಿ, ಅವನು ಆಸ್ಥೆಯಿಂದ ಭಾಗವಹಿಸಿ ಮಕ್ಕಳಿಗೆ ಯಾವಾಗಲೂ ನೆರವಾಗಬೇಕು. ಹೀಗೆ ಮಾಡುವದರಿಂದ ಅವನ ಬಗ್ಗೆ ಮಕ್ಕಳ ವಿಶ್ವಾಸವೂ ಆದರವೂ ಹೆಚ್ಚಾಗಿ ಅವರು ಅವನ ನಿಜವಾದ ಅನುಯಾಯಿಗಳಾಗುತ್ತಾರೆ.

**ಶಿಕ್ಷಕ-ಶಿಕ್ಷಕರ ಸಂಬಂಧ :—** ಶಿಕ್ಷಣವು ಸಾಹಕಾರಿಕ ಕಾರ್ಯ. ಶಾಲೆಯ ಎಲ್ಲ ಶಿಕ್ಷಕರಲ್ಲಿ ಸಂಪೂರ್ಣ ಸಹಕಾರವಿರದಿದ್ದರೆ ಶಾಲೆಯ ಕೆಲಸವು ಎಂದಿಗೂ ಸುಸೂತ್ರವಾಗಿ ನಡೆಯಲಾರದು. ವಿಷಯ ಪತ್ರಿಕೆಯ ವಿವಿಧ ವಿಷಯಗಳನ್ನು ಸುಸಂಬದ್ಧವಾಗಿ ಕ್ರಮಗೊಳಿಸುವಾಗ ಶಾಲೆಯ ಎಲ್ಲ ಶಿಕ್ಷಕರು ಒಮ್ಮನಸ್ಸಿನಿಂದ ಕೂಡಿ ಕೆಲಸ ಮಾಡಬೇಕಾಗುತ್ತದೆ. ಮುಖ್ಯ ಶಿಕ್ಷಕನು ತಮ್ಮ ನಾಯಕನೂ ಹಿತಚಿಂತಕನೂ ಆಗಿರುವನೆಂದು ತಿಳಿದು ಉಪಶಿಕ್ಷಕರೆಲ್ಲ ಅವನಿಗೆ ಆತ್ಮ ಸಂತೋಷದಿಂದ ಅಧೀನರಾಗಿ ನಡೆಯಬೇಕು. ಹಾಗೆಯೇ ಮುಖ್ಯ ಶಿಕ್ಷಕನು ತನ್ನ ಉಪಶಿಕ್ಷಕರನ್ನು ಸ್ನೇಹಭಾವದಿಂದ ಕಂಡು ಅವರಿಗೆ ಮನಃಪೂರ್ವಕವಾಗಿ ಯಾವಾಗಲೂ ನೆರವಾಗಬೇಕು. ಶಿಕ್ಷಕರ ಪರಸ್ಪರ ಸಂಬಂಧದ ಹಲವು ಮಹತ್ತ್ವದ ಮಾತುಗಳನ್ನು ಕೆಳಗೆ ಕೊಟ್ಟಿದೆ. ಪ್ರತಿಯೊಬ್ಬ ಶಿಕ್ಷಕನು ಯಾವಾಗಲೂ ಅವುಗಳನ್ನು ಲಕ್ಷಿಸಿ ನಡೆಯುವದು ಒಳ್ಳೆಯದು.

ಅ ಶಿಕ್ಷಕನು ಶಾಲೆಯ ಆಡಳಿತೆಯಲ್ಲಿ ಹಾಗು ಇತರ ಸಹಶಿಕ್ಷಕರಲ್ಲಿ ನಿಷ್ಠೆಯುಳ್ಳವನಾಗಿರಬೇಕು. ಸ್ವಾಭಿಮಾನ ಮತ್ತು ಹೊಣೆ ಇವುಗಳಿಗೆ ಬಾಧೆಬರುವ ಪ್ರಸಂಗಗಳನ್ನು ಬಿಟ್ಟು ಉಳಿದ ಎಲ್ಲ ಪ್ರಸಂಗಗಳಲ್ಲಿ ಮುಖ್ಯ ಶಿಕ್ಷಕನಿಗೂ ಸಹಶಿಕ್ಷಕರಿಗೂ ಮನಃಪೂರ್ವಕವಾಗಿ ನೆರವಾಗಬೇಕು. ಹೀಗೆ ನೆರವಾಗುವದೇ ಸಹಕಾರದ ಮೂಲವು.

ಬ ಅವಶ್ಯಕಂಡಾಗೆಲ್ಲ ಶಿಕ್ಷಕನು ಶಾಲೆಯ ಧೋರಣಗಳನ್ನು ಎತ್ತಿಹಿಡಿಯಬೇಕು. ಸ್ವಾಭಿಪ್ರಾಯಕ್ಕೆ ಪ್ರತಿಯಾಗಿ ತಾನು ಬೆಂಬಲಕೊಡಲು ಅವಶ್ಯವಿದ್ದ ಧೋರಣಗಳಿದ್ದರೆ ಅವುಗಳನ್ನು ಟೀಕಿಸದೆ ಮೌನವನ್ನು ತಳೆಯಬೇಕು.

ಕ ಮುಖ್ಯ ಶಿಕ್ಷಕನು ತನ್ನ ಎಲ್ಲ ಉಪಶಿಕ್ಷಕರನ್ನು ಯಾವಾಗಲೂ ಸಹಾನುಭೂತಿಯಿಂದಲೂ ಸ್ನೇಹಭಾವದಿಂದಲೂ ನಡೆಯಿಸಿಕೊಳ್ಳಬೇಕು. ಉಪಶಿಕ್ಷಕರಿಗೆ ಸಹಾಯಮಾಡುವದೇ ತನ್ನ ಧರ್ಮವೆಂದು ಅವನು ತಿಳಿಯಬೇಕು.

ಡ ಶಿಕ್ಷಕನು ತನ್ನ ಸಹಶಿಕ್ಷಕರನ್ನು ವಿದ್ಯಾರ್ಥಿಗಳೆದುರಿನಲ್ಲಾಗಲಿ ಹೊರಗಿನವರೆದುರಿನಲ್ಲಾಗಲಿ ಎಂದಿಗೂ ಟೀಕಿಸಬಾರದು. ತನ್ನ ಹಿಂದೆ ಆಗಿಹೋದ ಶಿಕ್ಷಕರನ್ನು ಟೀಕಿಸುವದಂತೂ ಅನ್ಯಾಯದ ಪರಮಾವಧಿ.

ಇ ಶಿಕ್ಷಕನು ಒಬ್ಬ ವಿದ್ಯಾರ್ಥಿಯನ್ನು ಮತ್ತೊಬ್ಬ ವಿದ್ಯಾರ್ಥಿಯ ಎದುರಿನಲ್ಲಿ ತಿರಸ್ಕರಿಸಿ ಮಾತಾಡಬಾರದು. ಇದರಿಂದ ಶಿಕ್ಷಕನ ಮಾನ್ಯತೆಗೆ ಕುಂದು ಬರುವದು.

**ಶಿಕ್ಷಕ-ಪಾಲಕರ ಸಂಬಂಧ :—** ಮಕ್ಕಳ ಶಿಕ್ಷಣವನ್ನು ಮುಖ್ಯವಾಗಿ ಎರಡು ಸಂಸ್ಥೆಗಳು ಸಾಗಿಸುತ್ತವೆ. ಅವು ಮನೆ ಹಾಗು ಶಾಲೆ. ಮಕ್ಕಳು ಮನೆಯಲ್ಲಿ ಹೆಚ್ಚುಕಾಲ ಕಳೆಯುವರು; ಅಲ್ಲಿ ಅವರಿಗೆ ಸ್ವಾತಂತ್ರ್ಯ ಹೆಚ್ಚು. ಆದುದರಿಂದ ಅವರಿಗೆ ಅಲ್ಲಿ ದೊರೆಯುವ ಅನುಭವಗಳು ಅತ್ಯಂತ ಮಹತ್ತ್ವವಾದವುಗಳು. ಶಾರೀರಕ ಚಟುವಟಿಕೆಗಳನ್ನು ಪ್ರಾರಂಭಿಸುವದು, ಇಂದ್ರಿಯಾನುಭವಗಳನ್ನು ಪಡೆಯುವದು, ತಿಳಿವಳಿಕೆ ಹುಟ್ಟುವದು, ನಡತೆ ಮಾರ್ಪಡಲು ಪ್ರಾರಂಭವಾಗುವದು, ಇವೇ ಮುಂತಾದ ಅನೇಕ ಸಂಗತಿಗಳು ಮನೆಯಲ್ಲಿಯೇ ಜರಗುತ್ತವೆ. ಆದರೆ ಮಗುವಿನ ಶಿಕ್ಷಣಕ್ಕಾಗಿ ಅತ್ಯಾವಶ್ಯಕವಾದ ಅನೇಕ ಮುಖ್ಯವಾದ ಕಾರ್ಯಗಳು ಶಾಲೆಯಲ್ಲಿಯೇ ನಡೆಯುತ್ತವೆ. ಶಾಲೆಯಲ್ಲಿ ನಡೆಯುವ ಕಾರ್ಯಗಳು ಮನೆಯಲ್ಲಿ ಗ್ರಹಿಸಿದ ಸಂಗತಿಗಳೊಡನೆ ಮಕ್ಕಳ ಮನಸ್ಸನ್ನು ಕ್ರಮಪಡಿಸಲು ವಿಶೇಷವಾಗಿ ಸಹಾಯವನ್ನು ಮಾಡುವವು. ಶಾಲೆಯಲ್ಲಿ ಜನಸಾಮಾನ್ಯವೆಲ್ಲ ಅಗತ್ಯವಾಗಿ ತಿಳಿದಿರಬೇಕಾದ ಜ್ಞಾನ ವಿಶೇಷಗಳು ಮಕ್ಕಳಿಗೆ ದೊರೆಯುವವು. ಶಾಲೆಯು ಒಂದು ಚಿಕ್ಕ ಸಮಾಜವು. ಸಮಾಜದಲ್ಲಿ ಹೇಗೆ ವರ್ತಿಸಬೇಕು?–ತಮ್ಮ ಸಾಮಾಜಿಕ ಹೊಣೆಗಳು ಯಾವವು?-ಅವುಗಳನ್ನು ಹೊರಲಿಕ್ಕೆ ಹೇಗೆ ಸಿದ್ಧರಾಗಬೇಕು? ಇವೇ ಮುಂತಾದ ಸಾಮಾಜಿಕ ಸಂಗತಿಗಳನ್ನು ಮಕ್ಕಳು ಅಲ್ಲಿ ಕಲಿಯುತ್ತಾರೆ. ಆದುದರಿಂದ ಮಕ್ಕಳ ಶಿಕ್ಷಣವು ಸುಲಭವೂ ಫಲಕಾರಿಯೂ ಆಗಬೇಕಾದರೆ ಮನೆ–ಶಾಲೆ ಇವುಗಳಲ್ಲಿ ಸಂಪೂರ್ಣ ಸಹಕಾರವಿರಬೇಕಾಗುತ್ತದೆ. ಈ ಮಾತನ್ನು ಶಿಕ್ಷಕನು ಲಕ್ಷದಲ್ಲಿಟ್ಟುಕೊಂಡು ಯಾವಾಗಲೂ ವಿದ್ಯಾರ್ಥಿಗಳ ಪಾಲಕರ ಸಹಕಾರ-ಸಹಾಯಗಳನ್ನು ಪಡೆಯಲು ಪ್ರಯತ್ನಿಸಬೇಕು. ಇವುಗಳನ್ನು ದೊರಕಿಸಲು ಹಲವು ಉಪಾಯಗಳಿರುವವು. ಅವು ಯಾವವೆಂದರೆ:—

ಅ. ಮಕ್ಕಳನ್ನು ಶಾಲೆಯಲ್ಲಿ ಸೇರಿಸಿಕೊಳ್ಳುವಾಗ ಶಿಕ್ಷಕನು ಅವರ ಪಾಲಕರನ್ನು ಸಂದರ್ಶಿಸುವದು.

ಆ. ವರ್ಷಕ್ಕೊಮ್ಮೆ ಶಾಲೆಯಲ್ಲಿ "ಪಾಲಕರ ದಿನ" ವನ್ನು ಆಚರಿಸುವದು.

ಇ. ಶಾಲೆಯ ವಾರ್ಷಿಕೋತ್ಸವ, ಆಟಪಾಟಗಳ ಸ್ಪರ್ಧೆ, ಪಾರಿತೋಷಕ ಸಮಾರಂಭ, ಪಂಡಿತರ ಉಪನ್ಯಾಸಗಳ ಏರ್ಪಾಡು ಮುಂತಾದ ಅನೇಕ ಸಂದಂರ್ಭಗಳಲ್ಲಿ ಪಾಲಕರನ್ನು ಕರೆಯಿಸಿಕೊಳ್ಳುವದು.

ಈ. ಶಿಕ್ಷಕನು ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸಿ ಪಾಲಕರ ಪರಿಚಯವನ್ನು ಮಾಡಿಕೊಳ್ಳುವದು, ಇತ್ಯಾದಿ.

**ಶಿಕ್ಷಕನ ಸಾಮಾಜಿಕ ಹೊಣೆಗಳು** :— ಶಿಕ್ಷಕವೃತ್ತಿಯಲ್ಲಿ ಸದಾ ಗಮನಿಸಬೇಕಾದ ಸಂಗತಿಯೆಂದರೆ ಶಿಕ್ಷಕನ ಸಾಮಾಜಿಕ ವರ್ತನೆ. ಶಿಕ್ಷಕವೃತ್ತಿಯು ಗೌರವಾರ್ಹವೆಂದು ಜನಸಾಮಾನ್ಯವು ತಿಳಿಯುವದರಿಂದ ಶಿಕ್ಷಕನ ವರ್ತನೆಯು ಆದರ್ಶವಾಗಿರಬೇಕೆಂದು ಬೇರೆ ಹೇಳುವ ಕಾರಣವಿಲ್ಲ. ಜನತೆಯು ಸಹಜವಾಗಿ ದುರ್ಲಕ್ಷಿಸುವ ಎಷ್ಟೋ ನೈತಿಕ ನಿಯಮಗಳನ್ನು ಸಹ ಶಿಕ್ಷಕನು ಬಹು ಜಾಗರೂಕತೆಯಿಂದ ಪಾಲಿಸಬೇಕಾಗುತ್ತದೆ; ಎಷ್ಟೋ ಸಾತ್ವಿಕವಾದ ಮನರಂಜನೆಯ ವಿಷಯಗಳನ್ನು ಬಿಟ್ಟುಬಿಡಬೇಕಾಗುತ್ತದೆ. ಮಕ್ಕಳಲ್ಲಿ ನೆಲೆಸಬೇಕಾದ ಸದ್ಗುಣಗಳು ಅವರ ತಂದೆತಾಯಿ ಪಾಲಕರಲ್ಲಿ ಕಂಡು ಬರದಿದ್ದರೂ ಅವು ಶಿಕ್ಷಕನಲ್ಲಿ ಮಾತ್ರ ಇರಲೇಬೇಕು. ತಂಬಾಕದ ಹೊಗೆಯಲ್ಲಿ ಯಾವಾಗಲೂ ಮುಳುಗಿ ಏಳುವ ಎಷ್ಟೋ ಪಾಲಕರು ಶಿಕ್ಷಕನು ಅದನ್ನು ಎಷ್ಟೇ ಮಿತಿಯಿಂದ ಸೇದಿದರೂ ರೇಗಿಗೆದ್ದು ಒದರಾಡುವದುಂಟು. ಆದುದರಿಂದ ಶಿಕ್ಷಕನು ತನ್ನ ಸದ್ವರ್ತನೆಗೆ ಬಾಧೆ ತರುವ ಎಲ್ಲ ಸಂಗತಿಗಳಿಂದ ದೂರ ಇರಬೇಕಾಗುವದು.

ಇನ್ನು ಶಿಕ್ಷಕನು ತಾನಿರುವ ಸಮಾಜದ ಮುಂದಾಳುತನವನ್ನು ಎಷ್ಟರ ಮಟ್ಟಿಗೆ ವಹಿಸಬೇಕೆಂಬುದು ಒಂದು ದೊಡ್ಡ ಸಮಸ್ಯೆಯಾಗಿದೆ.

ವಿದ್ವಾಂಸನೂ ಸದಾಚಾರಿಯೂ ಆದ ಶಿಕ್ಷಕನು ಆಗಾಗ್ಗೆ ಮಹತ್ತ್ವದ ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗ ವಹಿಸುತ್ತ ಹೋದರೆ ಅವನ ವರ್ಚಸ್ಸು ಜನರಮೇಲೆ ಖಂಡಿತವಾಗಿ ಬೀಳುವದು; ಮತ್ತು ಅದರ ಪರಿಣಾಮವಾಗಿ ಅವರು ಅವನಿಗೆ ಶಿಕ್ಷಣದ ಕೆಲಸದಲ್ಲಿ ಯಾವಾಗಲೂ ಸಹಾನುಭೂತಿಯಿಂದ ನೆರವಾಗುವರು. ಶಿಕ್ಷಕನು ವಿಶೇಷವಾಗಿ ಸಮಾಜದಲ್ಲಿ ಕೂಡಿಕೊಂಡಿದ್ದರೆ ಅವನಲ್ಲಿ ಸಾಧಾರಣವಾಗಿ ಕಂಡು ಬರುವ ಸಂಕುಚಿತವೃತ್ತಿಯು ದೂರಾಗುತ್ತದೆ; ಎಷ್ಟೋ ಶಾಲಾ ಸಮಸ್ಯೆಗಳು ಸಹಜವಾಗಿ ಪರಿಹಾರವಾಗುತ್ತವೆ. ಅವನಿಗೆ ವಿದ್ಯಾರ್ಥಿಗಳ ಪಾಲಕರ ಪರಿಚಯವು ಸುಲಭವಾಗಿ ದೊರಕಿ ಅವನ ಕಾರ್ಯಕ್ಕೆ ಅತ್ಯಂತ ಉಪಯುಕ್ತವಾದ ಸಹಾಯವು ನಿಸ್ಸಂದೇಹವಾಗಿ ಲಭಿಸುವದು. ಆದರೆ ಇಲ್ಲಿ ಒಂದು ಸೂಚನೆ ಆವಶ್ಯಕ. ಅದೇನಂದರೆ: ಶಿಕ್ಷಕನು ಕೇವಲ ಸಾಮಾಜಿಕ ಚಟುವಟಿಕೆಗಳಲ್ಲಿಯೇ ಹೆಚ್ಚು ಮನಸ್ಸು ಹಾಕಿ ತನ್ನ ಎಲ್ಲ ಕಾಲವನ್ನೂ ಉತ್ಸಾಹವನ್ನೂ ಅವುಗಳಲ್ಲಿಯೇ ವ್ಯಯಮಾಡಕೂಡದು; ಸಮಾಜದ ಪಕ್ಷ-ಪಂಗಡಗಳಲ್ಲಿ ಎಂದೂ ಸೇರಕೂಡದು; ಮತ್ತು ವಾದಗ್ರಸ್ತವಾದ ಸಮಸ್ಯೆಗಳಲ್ಲಿಯಂತೂ ಭಾಗ ವಹಿಸಲೇ ಕೂಡದು.

# ೯. ಶಿಕ್ಷಕರ ಟ್ರೇನಿಂಗಿನ ಸಮಸ್ಯೆ

ಶಿಕ್ಷಕರಿಗೆ ಸಾಮಾನ್ಯ ಶಿಕ್ಷಣವಲ್ಲದೆ ಟ್ರೇನಿಂಗಿನ ಆವಶ್ಯಕತೆ ಇದೆಯೇ?— ಎಂಬ ಪ್ರಶ್ನೆಯು ಬಹಳ ಚರ್ಚೆಗೆ ಅವಕಾಶಕೊಟ್ಟಿದೆ. ಶಿಕ್ಷಕರಿಗೆ ಟ್ರೇನಿಂಗು ಅತ್ಯವಶ್ಯವೆಂದು ಕೆಲವರೂ, ಅನಾವಶ್ಯಕವೆಂದು ಕೆಲವರೂ ಹೇಳುತ್ತಾರೆ. ಅನಾವಶ್ಯಕವೆಂದು ಹೇಳುವವರು ಅನೇಕ ಕಾರಣಗಳನ್ನು ಕೊಡುತ್ತಾರೆ. ಅವುಗಳಲ್ಲಿ ಮುಖ್ಯವಾದವುಗಳನ್ನು ಕೆಳಗೆ ವಿಮರ್ಶಿಸಲಾಗಿದೆ.

**೧ ಶಿಕ್ಷಣ ಕಲೆಯು ದೇವರು ದಯಪಾಲಿಸಿದ ಒಂದು ವರವು. ಇದನ್ನು ಪಡೆದವರಿಗೆ ಟ್ರೇನಿಂಗಿನ ಆಗತ್ಯವೇ ಇರುವದಿಲ್ಲ. ಈ ವರವನ್ನು ಪಡೆಯದವರಿಗೆ ಎಷ್ಟೇ ಟ್ರೇನಿಂಗು ದೊರೆತರೂ ಅವರು ಉತ್ತಮ ಶಿಕ್ಷಕರಾಗಲಾರರು. ಹೇಗೆಯೆ ಆದರೂ ಟ್ರೇನಿಂಗು ಅನಾವಶ್ಯಕ.**

ಶಿಕ್ಷಣ ಕಲೆಯು ದೇವದತ್ತವಾಗಿರಬೇಕು ಎನ್ನುವದೇನೋ ನಿಜ. ಇಷ್ಟರಿಂದಲೇ ಟ್ರೇನಿಂಗು ಅನಾವಶ್ಯಕವೆಂದು ಹೇಳುವದು ಸರಿಯಾಗಲಾರದು. ಶಿಕ್ಷಣವು ಒಂದು ಕಲೆಯಾದುದರಿಂದ ಅದನ್ನು ಉದ್ದೇಶಪೂರ್ವಕವಾಗಿ ಅಭಿವೃದ್ಧಿಗೊಳಿಸದ ಹೊರತು ಅದರಿಂದ ಪ್ರಯೋಜನವಾಗಲಾರದು. ಆದುದರಿಂದ ಟ್ರೇನಿಂಗು ಅತ್ಯಗತ್ಯ. ಇನ್ನು ಈ ಕಲೆಯನ್ನು ದೇವರಿಂದ ಪಡೆದವರೇ ಶಿಕ್ಷಕರಾಗಬೇಕೆಂದು ಹೇಳಿದರೆ ಜಗತ್ತಿನಲ್ಲಿ ಶಿಕ್ಷಣ ಕಾರ್ಯವು ನಡೆಯುವದೇ ಅಸಾಧ್ಯ. ಏಕೆಂದರೆ, ಅಂಥವರು ದೊರೆಯುವದು ಅತಿ ವಿರಳ. ಸಾವಿರ ಶಿಕ್ಷಕರಲ್ಲಿ ಒಬ್ಬಿಬ್ಬರು ದೊರೆಯುವರೋ ಇಲ್ಲವೋ ಸಂದೇಹ. ಮಕ್ಕಳ ಶಿಕ್ಷಣವನ್ನು ದೊಡ್ಡ ಪ್ರಮಾಣದಲ್ಲಿ ಸಾಗಿಸುವದಕ್ಕಾಗಿ ಸಾಮಾನ್ಯ ಶಿಕ್ಷಣವನ್ನು ಹೊಂದಿದ ಎಷ್ಟೋ ಜನರನ್ನು ಶಿಕ್ಷಕ ವೃತ್ತಿ

ಯಲ್ಲಿ ಸೇರಿಸಿಕೊಳ್ಳಬೇಕಾಗುತ್ತದೆ. ಇಂಥ ಜನರಿಗೆ ಒಂದೆರಡು ವರ್ಷಗಳ ಟ್ರೇನಿಂಗು ಕೊಟ್ಟರೆ ಅವರು ತಕ್ಕಮಟ್ಟಿಗೆ ಉತ್ತಮ ಶಿಕ್ಷಕರಾಗಿ ಪರಿಣಮಿಸುವರೆಂಬುದು ಅನುಭವದಿಂದ ತಿಳಿದ ಸಂಗತಿಯಾಗಿದೆ.

**೨ ಸಾಕಷ್ಟು ಸಾಮಾನ್ಯ ಶಿಕ್ಷಣ, ತಾಳ್ಮೆ ಮತ್ತು ಮಕ್ಕಳನ್ನು ಆಳುವ ಸಾಮರ್ಥ್ಯ ಇಷ್ಟಿದ್ದರೆ ಸಾಕು, ಬೇಕಾದವರು ಶಿಕ್ಷಕರಾಗಬಲ್ಲರು; ಅವರಿಗೆ ಬೇರೆ ಯಾವದೇ ತರದ ಟ್ರೇನಿಂಗಿನ ಅಗತ್ಯವಿಲ್ಲ.**

ಇದು ಸಂಕುಚಿತ ದೃಷ್ಟಿ; ಹುರುಳಿಲ್ಲದ ಮಾತು. ಶಿಕ್ಷಕರಾಗಬೇಕೆನ್ನುವವರು ಮೇಲೆ ಹೇಳಿದ ಸಂಗತಿಗಳನ್ನಲ್ಲದೆ ಬೇರೆ ಅನೇಕ ಸಂಗತಿಗಳನ್ನು ತಿಳಿಯಬೇಕಾಗುತ್ತದೆ. ಕಲಿಯಬೇಕೆಂಬ ಹಂಬಲದಿಂದ ಬರುವ ಮಕ್ಕಳಿಗೆ ಕಲಿಸಲಿಕ್ಕೆ ಇಷ್ಟೇ ಸಂಗತಿಗಳು ಒಂದು ವೇಳೆ ಸಾಕಾಗಬಹುದು. ಆದರೆ ಇಂಥ ಮಕ್ಕಳು ದೊರೆಯುವದೆಷ್ಟು? ಕಲಿಯಬೇಕೆಂಬ ಕುತೂಹಲವನ್ನು ಮಕ್ಕಳಲ್ಲಿ ಹುಟ್ಟಿಸುವದೇ ಶಿಕ್ಷಕನ ಅತ್ಯಂತ ಮಹತ್ತ್ವದ ಕೆಲಸ. ಇದಲ್ಲದೆ ಶಿಕ್ಷಕನು ತಾನು ಕಲಿಸಬೇಕಾದ ವಿಷಯಗಳನ್ನು ತಿಳಿದುಕೊಂಡರೆ ಮಾತ್ರ ಸಾಲದು. ಅವುಗಳನ್ನು ಕಲಿಸುವ, ಮಕ್ಕಳು ಕಲಿಯುವ, ಕ್ರಮಗಳನ್ನು ಅವನು ತಿಳಿದುಕೊಳ್ಳಬೇಕಾಗುತ್ತದೆ. ಇವನ್ನು ಟ್ರೇನಿಂಗು ಪಡೆದು ತಿಳಿದುಕೊಳ್ಳಬಹುದು.

**೩ ಶಿಕ್ಷಣ ಕಲೆಯು ಕ್ರಮೇಣ ಅನುಭವದಿಂದ ತನ್ನಷ್ಟಕ್ಕೆ ತಾನೇ ಸಾಧಿಸುವದು. ಟ್ರೇನಿಂಗು ಅನಾವಶ್ಯಕ.**

ಈ ಮಾತಿನಲ್ಲಿ ತಥ್ಯಾಂಶವಿದೆ. ಸ್ವಾನುಭವಕ್ಕಿಂತ ಉತ್ತಮವಾದ ಶಿಕ್ಷಣವು ಬೇರೊಂದಿಲ್ಲವೆಂಬುದು ನಿರ್ವಿವಾದವಾದ ಮಾತು. ಆದರೆ ಶಿಕ್ಷಕನು ಸ್ವಾನುಭವದಿಂದ ಯುಕ್ತವಾದ ಕ್ರಮಗಳನ್ನು ಕಂಡುಕೊಳ್ಳುವ ಪೂರ್ವದಲ್ಲಿ ಅವನು ಮಾಡಬಹುದಾದ ತಪ್ಪುಗಳಿಂದ ಎಷ್ಟೋ ಮಕ್ಕಳು ಹಾನಿಗೀಡಾಗಬಹುದು; ಇದಲ್ಲದೆ, ತಮ್ಮ ಪ್ರತಿಯೊಂದು ಅನುಭವವನ್ನು ಕುರಿತು ಚನ್ನಾಗಿ ಯೋಚಿಸಿ ಅದರ ಮೂಲಕ ತಮಗೆ ಬೇಕಾದ ಯೋಗ್ಯ ಶಿಕ್ಷಣ ಕ್ರಮಗಳನ್ನು ಕಂಡುಕೊಳ್ಳುವ ಶಿಕ್ಷಕರು ಬಹಳ ಕಡಿಮೆ. ತಮ್ಮ ಅನುಭವಗಳ ಮೇಲೆಯೇ ಯಾವಾಗಲೂ

ಕೈಯೂರವೆ ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡಿದ ಇತರರ ಅನುಭವಗಳನ್ನೂ ತಿಳಿದುಕೊಳ್ಳುವದು ಲೇಸು. ಇದರಿಂದ ಸ್ವಾನುಭವದಿಂದ ಕಂಡುಕೊಂಡ ಕ್ರಮಗಳ ಯೋಗ್ಯಾಯೋಗ್ಯತೆಯನ್ನು ಗೊತ್ತುಹಚ್ಚಲು ಸಹಾಯವಾಗುವದು. ಇವೆಲ್ಲ ಕಾರಣಗಳ ಮೂಲಕ ಶಿಕ್ಷಕನು ತನ್ನ ವೃತ್ತಿಯನ್ನು ಕೈಕೊಳ್ಳುವ ಪೂರ್ವದಲ್ಲ ಇತರರು ಕಂಡು ಹಿಡಿದ ಶಿಕ್ಷಣ ಕ್ರಮಗಳನ್ನು ಟ್ರೇನಿಂಗಿನ ಮೂಲಕ ತಿಳಿದುಕೊಳ್ಳುವದು ಅವಶ್ಯಕ.

ಇಲ್ಲಿಯವರೆಗೆ ಟ್ರೇನಿಂಗು ಅನಾವಶ್ಯಕವೆಂದು ಹೇಳುವವರ ಆಕ್ಷೇಪಣೆಗಳನ್ನು ಪರಿಶೀಲಿಸಿದ್ದಾಯಿತು. ಇನ್ನು ಶಿಕ್ಷಕರಿಗೆ ಟ್ರೇನಿಂಗು ಏಕೆ ಅಗತ್ಯವಿರವದೆಂಬುದನ್ನು ಕುರಿತು ವಿಚಾರಿಸುವಾ.

ಯಾವದೊಂದು ಉದ್ಯೋಗವನ್ನು ಕೈಕೊಳ್ಳಬೇಕೆನ್ನುವವರು ಅದಕ್ಕೆ ಸಂಬಂಧಿಸಿದ ಕೈವಾಡ ಕೌಶಲ್ಯಗಳನ್ನೊಳಗೊಂಡ ವೃತ್ತಿ-ಶಿಕ್ಷಣವನ್ನು ಹೊಂದಬೇಕಾಗುತ್ತದೆ. ಶಿಕ್ಷಣವೂ ಒಂದು ಉದ್ಯೋಗವು. ಈ ಉದ್ಯೋಗವನ್ನು ಕೈಕೊಳ್ಳುವ ಪ್ರತಿಯೊಬ್ಬ ವ್ಯಕ್ತಿಯೂ ಅದಕ್ಕೆ ಅನ್ವಯಿಸುವ ವೃತ್ತಿ-ಶಿಕ್ಷಣವನ್ನು ಪಡೆಯಲೇ ಬೇಕಾಗಿರುತ್ತದೆ. ಶಿಕ್ಷಕನು ತನ್ನ ವೃತ್ತಿಗೆ ಸಂಬಂಧಿಸಿದ ಸಂಗತಿ-ಸಾಧನಗಳನ್ನು ಎಷ್ಟರ ಮಟ್ಟಿಗೆ ಅರಿತುಕೊಳ್ಳುವನೋ ಅಷ್ಟರ ಮಟ್ಟಿಗೆ ಅವನ ಕಾರ್ಯವು ಫಲಕಾರಿಯಾಗುವದು.

ಶಿಕ್ಷಣವು ಒಂದು ಕಲೆಯು. ಆ ಕಲೆಗೆ ತಳಹದಿಯಾಗಿ ಒಂದು ಶಾಸ್ತ್ರವೂ ಉಂಟು. ಆದುದರಿಂದ ಶಿಕ್ಷಕನಾಗಬೇಕೆಂಬ ಪ್ರತಿಯೊಬ್ಬ ವ್ಯಕ್ತಿಯು ಸಾಮಾನ್ಯ ಶಿಕ್ಷಣ ಹೊಂದಿದ ಬಳಿಕ, ಶಿಕ್ಷಣಶಾಸ್ತ್ರಕ್ಕೆ ಸಂಬಂಧಿಸಿದ ಸಿದ್ಧಾಂತಗಳನ್ನೂ ಶಿಕ್ಷಣಕಲೆಗೆ ಸಂಬಂಧಿಸಿದ ನಿಯಮಗಳನ್ನೂ ಅರಿತುಕೊಳ್ಳಬೇಕಾಗುವದು. ಅವನು ಮೊಟ್ಟಮೊದಲು ಶಿಕ್ಷಣವೆಂದರೇನು ?— ಅದರ ಗೊತ್ತು ಗುರಿಗಳು ಯಾವವು ?- ಅದನ್ನು ಸಾಗಿಸುವ ಸಂಸ್ಥೆಗಳು ಯಾವವು ?— ಇತ್ಯಾದಿ ಸಂಗತಿಗಳನ್ನು ತಿಳಿಯಬೇಕು. ಶಿಕ್ಷಣವು ಮುಖ್ಯವಾಗಿ ಮಗುವಿನ ವಿಕಾಸಕ್ಕೆ ಸಂಬಂಧಿಸಿರುವದರಿಂದ ಮಗುವಿನ ವಿಕಾಸದ ರೀತಿ ನೀತಿಗಳನ್ನೂ ಅದರ ಕ್ರಮವನ್ನೂ

ವಿವಿಧ ಅವಸ್ಥೆಗಳನ್ನೂ ಲಕ್ಷಣಗಳನ್ನೂ ಅವನು ತಿಳಿಯಬೇಕು. ಇದಕ್ಕಾಗಿ ಅವನು ಶೈಕ್ಷಣಿಕ ಮಾನಸಶಾಸ್ತ್ರವನ್ನು ಅಧ್ಯಯನ ಮಾಡಬೇಕಾಗುವದು. ಜ್ಞಾನವು ಮಗುವಿನ ವಿಕಾಸದ ಸಾಧನವಾಗಿರುವದರಿಂದ ಶಿಕ್ಷಕನು ಜ್ಞಾನವಿಷಯಗಳನ್ನು ಮಕ್ಕಳ ಯೋಗ್ಯ ವಿಕಾಸಕ್ಕೆ ಅನುಕೂಲವಾಗುವಂತೆ ಅವುಗಳನ್ನು ಒದಗಿಸಿಕೊಡುವ ಕ್ರಮಗಳನ್ನು ಅರಿತುಕೊಳ್ಳಬೇಕು. ಶಿಕ್ಷಕನು ತನ್ನ ಕಾರ್ಯವನ್ನು ಚನ್ನಾಗಿ ಸಾಗಿಸಬೇಕಾದರೆ ಶಿಕ್ಷಣ ಕ್ಷೇತ್ರದಲ್ಲಿ ಪರಿಶ್ರಮವಹಿಸಿ ದುಡಿದ ಹಾಗೂ ದುಡಿಯುವ ಮಹನೀಯರ ಅನುಭವಗಳನ್ನೂ ನಿರ್ಣಯಗಳನ್ನೂ ಉಪಯೋಗಿಸಿಕೊಳ್ಳುವದು ಲೇಸಾದುದರಿಂದ ಅವನು ಶಿಕ್ಷಣದ ಸುಧಾರಣೆಯ ಇತಿಹಾಸವನ್ನು ಅಭ್ಯಸಿಸಬೇಕು. ಶಾಲೆಯಲ್ಲಿ ಪ್ರತಿಯೊಬ್ಬ ಶಿಕ್ಷಕನು ಅನೇಕ ವಿಷಯಗಳನ್ನು ಕಲಿಸಬೇಕಾಗುವದು. ಆದುದರಿಂದ ಅವನು ವಿವಿಧ ವಿಷಯಗಳನ್ನು ಕಲಿಸುವ ವಿಶಿಷ್ಟ ಪದ್ಧತಿಗಳನ್ನು ತಿಳಿದುಕೊಳ್ಳಬೇಕು. ಶಿಕ್ಷಣ ಸಂಸ್ಥೆಗಳಲ್ಲಿ ಶಾಲೆಯು ಮುಖ್ಯವಾದದ್ದು. ಶಿಕ್ಷಕನು ದುಡಿಯಬೇಕಾದುದು ಶಾಲೆಯಲ್ಲಿ. ಆದುದರಿಂದ ಶಾಲೆಯ ಶಿಸ್ತು, ವ್ಯವಸ್ಥೆ ಇವುಗಳಿಗೆ ಸಂಬಂಧಿಸಿದ ಅನೇಕ ಸಂಗತಿಗಳನ್ನು ಅವನು ಗೊತ್ತುಮಾಡಿಕೊಂಡು ಲಕ್ಷದಲ್ಲಿಡಬೇಕಾಗುವದು.

ಕಲಿಸುವ ಕಲೆಯನ್ನು ಕೈವಶ ಮಾಡಿಕೊಳ್ಳುವದು ಪ್ರತಿಯೊಬ್ಬ ಶಿಕ್ಷಕನ ಕರ್ತವ್ಯ. ಅದಕ್ಕಾಗಿ ಅವನು ಮಾದರಿಯ ಪಾಠಗಳನ್ನು ನಿರೀಕ್ಷಿಸಬೇಕು; ಅಲ್ಲದೆ ತಾನು ಅನೇಕ ಪಾಠಗಳನ್ನು ಪದ್ಧತಿ ಪ್ರವೀಣರ ನೇತೃತ್ವದಲ್ಲಿ ಕೊಟ್ಟು ತಾನು ಕಲಿತ ತತ್ತ್ವಗಳನ್ನು ರೂಢಿಯಲ್ಲಿ ತರಬೇಕು. ಹೀಗೆ ಮಾಡಿದರೆ ಮಾತ್ರ ಶಿಕ್ಷಣ ಕಲೆಯು ಸುಲಭ ಸಾಧ್ಯವಾಗುವದು. ಶಿಕ್ಷಕವೃತ್ತಿಗೆ ಅತ್ಯಂತ ಉಪಯುಕ್ತವಾದ ಮೇಲ್ಕಂಡ ಎಲ್ಲ ಸಂಗತಿಗಳನ್ನು ಒದಗಿಸಿಕೊಟ್ಟು ಭಾವೀ ಶಿಕ್ಷಕರಿಗೆಲ್ಲ ಸಹಾಯವನ್ನು ನೀಡುವ ಸಂಸ್ಥೆಯೆಂದರೆ ಟ್ರೇನಿಂಗ ಕಾಲೇಜು. ಆದ್ದರಿಂದ ಈ ಸಂಸ್ಥೆಯಲ್ಲಿ ಶಿಕ್ಷಕನಾಗಲಿಚ್ಛಿಸುವ ಪ್ರತಿಯೊಬ್ಬ ವ್ಯಕ್ತಿಯು ಅವಶ್ಯವಾಗಿ ಟ್ರೇನಿಂಗನ್ನು ಪಡೆಯಬೇಕು.

ಭಾಗ ೨

# ಕಲಿಸುವ ಕ್ರಮ

## ೧. ಕಲಿಸುವಿಕೆಯೂ ಕಲಿಯುವಿಕೆಯೂ

ಶಿಕ್ಷಣವು ಜ್ಞಾನದ ಮೂಲಕ ಮಕ್ಕಳ ವಿಕಾಸವನ್ನು ಬುದ್ಧಿಪೂರ್ವಕವಾಗಿ ರೂಪುಗೊಳಿಸುವ ವಿಧಾನ. ಜ್ಞಾನ ಅಥವಾ ಅನುಭವವು ಮಕ್ಕಳ ವಿಕಾಸದ ಸಾಧನ. ಇದನ್ನು ಒದಗಿಸಿಕೊಡುವದು ಶಿಕ್ಷಕನ ಕರ್ತವ್ಯ. ಶಿಕ್ಷಕನ ಈ ಕರ್ತವ್ಯಕ್ಕೆ ಕಲಿಸುವಿಕೆ ಎಂದು ಹೇಳುವದು ರೂಢವಾಗಿದೆ. ಕಲಿಸುವಿಕೆಯೆಂದರೆ ಮಕ್ಕಳ ಮನಸ್ಸಿನಲ್ಲಿ ಬಾಹ್ಯ ವಿಷಯುಗಳನ್ನು ತುಂಬುವ ಕಾರ್ಯವೆಂದು ಸಾಮಾನ್ಯವಾಗಿ ಜನರು ತಿಳಿದುಕೊಳ್ಳುತ್ತಾರೆ. ಮಕ್ಕಳ ಮನಸ್ಸು ಬರಿದಾದ ಪಾತ್ರೆಯು ಹಾಗಿರು

ವದೆಂಬ ಕಲ್ಪನೆಯೇ ಈ ತಪ್ಪು ತಿಳುವಳಿಕೆಯ ಕಾರಣ. ಆದರೆ ಮಕ್ಕಳ ಮನಸ್ಸು ಬರಿದಾದ ಪಾತ್ರೆಯಲ್ಲ. ಅದು ಚೈತನ್ಯಯುಕ್ತವಾದ ಸತ್ವ. ಬಾಹ್ಯ ವಿಷಯಗಳನ್ನು ಗ್ರಹಿಸಿ ಅರಗಿಸಿಕೊಂಡು ಅವುಗಳನ್ನು ಕ್ರಮ ಪಡಿಸಿಕೊಳ್ಳುವದು ಅದರ ಕ್ರಿಯೆ. ಬಾಲಕರ ಮನಸ್ಸಿನ ಈ ಕ್ರಿಯೆಗೆ ಕಲಿಯುವಿಕೆ ಎಂದು ಹೇಳುತ್ತಾರೆ.

**ಕಲಿಸುವಿಕೆ, ಕಲಿಯುವಿಕೆ—** ಇವು ಶಿಕ್ಷಣ ಕ್ರಮದ ಎರಡು ಮೈಗಳು. ಸಾಮಾನ್ಯವಾಗಿ ಕಲಿಯುವಿಕೆಗಿಂತ ಕಲಿಸುವಿಕೆಗೇ ಹೆಚ್ಚು ಪ್ರಾಮುಖ್ಯ ಕೊಡುವದುಂಟು. ಇದು ಸರಿಯಲ್ಲ. ಇದಕ್ಕೆ ಪ್ರತಿಯಾಗಿ ಕಲಿಸುವಿಕೆಗಿಂತ ಕಲಿಯುವಿಕೆಗೇ ಹೆಚ್ಚಾಗಿ ಮಹತ್ತ್ವವು ದೊರೆಯತಕ್ಕದ್ದು. ಕಲಿಸಿದ ವಿಷಯವನ್ನು ಮಕ್ಕಳು ಕಲಿಯದಿದ್ದರೆ ಅಂಥ ಶಿಕ್ಷಣದ ಪ್ರಯೋಜನವೇನು ? ಸರ್ವತೋಮುಖವಾದ ವಿಕಾಸಕ್ಕೆ ಅಗತ್ಯವಾದ ವಿಷಯಗಳನ್ನು ಮಕ್ಕಳ ಮುಂದಿಡುವದು ಶಿಕ್ಷಕನ ಕೆಲಸ. ಆದರೆ ಅವುಗಳನ್ನು ಗ್ರಹಿಸಿ ಅರಗಿಸಿಕೊಳ್ಳುವದು ಮಕ್ಕಳ ಕೆಲಸ. ಈ ಕಾರ್ಯದಲ್ಲಿ ಬಾಲಕರ ಸ್ವಂತ ಪ್ರಯತ್ನವು ಅತ್ಯಂತ ಮಹತ್ತ್ವವಾದದ್ದು. ಮಕ್ಕಳು ಕಲಿಯಲು ಪ್ರಯತ್ನ ಮಾಡದಿದ್ದರೆ ಶಿಕ್ಷಕನು ಎಷ್ಟು ಕಲಿಸಿದರೂ ನಿರರ್ಥಕ. ಅದು ಮರದ ಬೇರಿನಲ್ಲಿ ರಂಧ್ರವನ್ನು ಕೊರೆದು ಗೊಬ್ಬರ ನೀರನ್ನು ತುಂಬಿದಂತೆಯೇ ಸರಿ. ಆದುದರಿಂದ ಶಿಕ್ಷಣ ಕಾರ್ಯಕ್ರಮದಲ್ಲಿ ಮಕ್ಕಳ ಸ್ವಪ್ರಯತ್ನಕ್ಕೆ ಸಾಕಷ್ಟು ಆಸ್ಪದವಿರಬೇಕು. ಮಕ್ಕಳ ಸ್ವಪ್ರಯತ್ನ ಸಹಾಯಗಳನ್ನು ಪಡೆಯುವದು ಶಿಕ್ಷಕನ ಕರ್ತವ್ಯವಾಗಿದೆ.

ಕಲಿಸುವಿಕೆಯ ಅರ್ಥವು ಕೆಳಗಿನ ನಾಲ್ಕು ಸಂಗತಿಗಳಿಂದ ಸ್ಪಷ್ಟವಾಗುವದು.

**೧ ಕಲಿಸುವಿಕೆಯೆಂದರೆ ಮಕ್ಕಳಲ್ಲಿ ಚಾತುರ್ಯವನ್ನೂ ಕೆಲಸ ಮಾಡುವ ಶಕ್ತಿಯನ್ನೂ ಬೆಳೆಸುವದು.** ಮಕ್ಕಳಿಗೆ ಯಾವದೊಂದು ಸಂಗತಿಯನ್ನು ಕುರುಡುಪಾಠ ಮಾಡಿಸಿದರೆ ಅವರಿಗೆ

ಅದನ್ನು ಕಲಿಸಿದಂತಾಗುವದಿಲ್ಲ. ಅವರ ಬುದ್ಧಿಸಾಮರ್ಥ್ಯವು ಬೆಳೆದರೆ ಮಾತ್ರ ಕಲಿಸುವುದೂ ಕಲಿತುದುದೂ ಸಾರ್ಥಕವಾದಂತೆ.

೨ **ಕಲಿಸುವಿಕೆಯೆಂದರೆ ಮಕ್ಕಳಿಗೆ ಜ್ಞಾನ ಸಂಸ್ಕಾರವನ್ನುಂಟುಮಾಡುವದು.** ಮಕ್ಕಳು ತಾವು ಕಲಿಯಬೇಕಾದ ವಿಷಯಗಳನ್ನು ತಿಳಿದುಕೊಂಡರೆ ಮಾತ್ರ ಸಾಲದು. ಅವರು ಅವುಗಳನ್ನು ವ್ಯವಸ್ಥಿತ ರೀತಿಯಿಂದ ಅರಗಿಸಿಕೊಳ್ಳಬೇಕು. ಹೀಗೆ ಅರಗಿಸಿಕೊಂಡ ವಿಷಯವು ಅವರ ಮನಸ್ಸಿನ ಒಂದು ಭಾಗವಾಗಿ ಬೇಕಾದಾಗ ಉಪಯೋಗಿಸಿಕೊಳ್ಳಲಿಕ್ಕೆ ಹದವಾಗುತ್ತದೆ.

೩ **ಕಲಿಸುವಿಕೆಯೆಂದರೆ ಮಕ್ಕಳ ಮನಸ್ಸಿಗೆ ಒಂದು ರೂಢಿಯನ್ನು ಹಚ್ಚಿದಂತೆ.** ಮಕ್ಕಳ ಜ್ಞಾನಾರ್ಜನೆಯ ಕಾರ್ಯವು ಸುಸೂತ್ರವಾಗಿ ಏನೂ ತಡೆಯಿಲ್ಲದೆ ಸಾಗುವುದು ಈ ರೂಢಿಯಿಂದಲೇ.

೪ **ಕಲಿಸುವಿಕೆಯೆಂದರೆ ಕಲಿಯಲಿಕ್ಕೆ ನೆರವಾಗುವುದು.** ಮಕ್ಕಳಲ್ಲಿ ಕುತೂಹಲವನ್ನು ಹೆಚ್ಚಿಸಿ ಅವರು ಏಕಚಿತ್ತದಿಂದಲೂ ಸ್ವಪ್ರಯತ್ನದಿಂದಲೂ ಜ್ಞಾನಾರ್ಜನೆಯನ್ನು ಮಾಡುವಂತೆ ಪ್ರೇರಿಸುವದೇ ನಿಜವಾದ ಕಲಿಸುವಿಕೆಯು. ಮಕ್ಕಳ ಕಲಿಯುವಿಕೆಯಿಂದಲೇ ಶಿಕ್ಷಕನ ಕಲಿಸುವಿಕೆಯನ್ನು ಅಳೆಯಬಹುದು. ಇವನ್ನೇ ಬೇರೆ ಮಾತುಗಳಲ್ಲಿ ಹೇಳುವದಾದರೆ, ಮಕ್ಕಳ ಕಲಿಯುವಿಕೆಯೇ ಶಿಕ್ಷಕನ ಕಲಿಸುವಿಕೆಯ ಒರೆಗಲ್ಲು. ಆದುದರಿಂದ ಈಗ ಶಿಕ್ಷಣ ಕಾರ್ಯದಲ್ಲಿ ಕಲಿಸುವಿಕೆಗಿಂತ ಕಲಿಯುವಿಕೆಗೇ ಹೆಚ್ಚೆಚ್ಚು ಪ್ರಾಶಸ್ತ್ಯ ದೊರೆಯಹತ್ತಿದೆ. ಆಧುನಿಕ ಶಿಕ್ಷಣ ಪದ್ಧತಿಗಳಿಗೆಲ್ಲ ಈ ಹೊಸ ದೃಷ್ಟಿಯೇ ತಳಹದಿಯಾಗಿದೆ.

# ೨. ಅವಧಾನವೂ ಆಸಕ್ತಿಯೂ

ಜ್ಞಾನಾರ್ಜನೆಯ ಕಾರ್ಯದಲ್ಲಿ ಅವಧಾನವು ಅತ್ಯಾವಶ್ಯಕವಾದದ್ದು. ಅವಧಾನವೆಂದರೆ **ಏಕಚಿತ್ತದಿಂದ ಲಕ್ಷಿಸುವ ಕ್ರಿಯೆ.** ಯಾವದೊಂದು ವಿಷಯುವನ್ನು ಮಕ್ಕಳು ಚನ್ನಾಗಿ ಕಲಿಯಬೇಕಾದರೆ ಅವಕ್ಕೆ ಅವರು ಗಮನ ಕೊಡಲಿಕ್ಕೆ ಬೇಕು. ಮಕ್ಕಳಲ್ಲಿ ಅವಧಾನವೊಂದು ಇರವಿದ್ದರೆ ಶಿಕ್ಷಕನು ಕಲಿಸಲು ಕೈಕೊಳ್ಳುವ ಪ್ರರಿಶ್ರಮವೆಲ್ಲ ವ್ಯರ್ಥವಾಗುವದು. ಆದುದರಿಂದ ಶಿಕ್ಷಣವು ಫಲಕಾರಿಯಾಗಬೇಕಾದರೆ ಮಕ್ಕಳಲ್ಲಿ ಅವಧಾನ ಇರುವದು ಅತ್ಯಂತ ಮಹತ್ತ್ವವಾದದ್ದು.

ಅವಧಾನದಲ್ಲಿ ಎರಡು ಪ್ರಕಾರಗಳು:— **೧. ಐಚ್ಛಿಕ ಅವಧಾನ ೨. ಅನೈಚ್ಛಿಕ ಅವಧಾನ.** ಒಂದು ಪಾಠವು ನಿರಸವಾಗಿರಬಹುದು; ವಿಷಯವು ಕಠಿಣವಾಗಿರಬಹುದು; ಆದರೂ ಮಕ್ಕಳಿಗೆ ಆ ವಿಷಯದ ಮಹತ್ತ್ವವು ತಿಳಿದಿದ್ದರೆ ಅದನ್ನು ತಿಳಿದುಕೊಳ್ಳಲಿಕ್ಕೆ ಅವರು ಲಕ್ಷಪೂರ್ವಕವಾಗಿ ಪ್ರಯತ್ನಿಸುವರು. ಏಕೆಂದರೆ ಅದನ್ನು ಚನ್ನಾಗಿ ತಿಳಿದುಕೊಳ್ಳಬೇಕೆಂಬ ಹಂಬಲವು ಅವರಲ್ಲಿ ಹೆಚ್ಚಿದೆ, ಎಂದರೆ ಆ ವಿಷಯದಲ್ಲಿ ಮಕ್ಕಳಿಗೆ ಅಭಿರುಚಿ ಹುಟ್ಟಿದೆ; ಆಸಕ್ತಿಯುಂಟಾಗಿದೆ. ಅಂತೆಯೇ ಅವರು ಆ ಪಾಠದ ವಿಷಯದಲ್ಲಿ ತಡೆಯಿಲ್ಲದ ಅವಧಾನವನ್ನು ತೋರಿಸುತ್ತಾರೆ. ಹೀಗೆ **ಸ್ವಪ್ರಯತ್ನದಿಂದ ಯಾವದೊಂದು ವಿಷಯದ ಕಡೆಗೆ ಲಕ್ಷವನ್ನು ತೊಡಗಿಸುವದಕ್ಕೆ ಐಚ್ಛಿಕ ಅವಧಾನ** ಎನ್ನುತ್ತಾರೆ. ಇದು ವಿಶೇಷವಾಗಿ ಹೊಣೆಯ ಮಹತ್ತ್ವವನ್ನರಿತ ದೊಡ್ಡ ಹುಡುಗರಲ್ಲಿ ಕಂಡುಬರುತ್ತದೆ. ಚಿಕ್ಕಮಕ್ಕಳು ಮಾತ್ರ ತಮ್ಮ ಹೊಣೆಯನ್ನು ತಾವೇ ಅರಿಯದ್ದರಿಂದ ಅವರು ತಮಗೆ ರುಚಿಸದ ವಿಷಯಗಳ ಕಡೆಗೆ ಅವು ಎಷ್ಟೇ ಮಹತ್ತ್ವವಿದ್ದರೂ ಪ್ರಯತ್ನಪೂರ್ವಕವಾಗಿ ಲಕ್ಷ

ಕೊಡುವದಿಲ್ಲ. ಆದರೆ ಪಾಠವಲ್ಲಿ ಶಿಕ್ಷಕನು ಸುಂದರವಾದ ಚಿತ್ರಗಳನ್ನು ಇಲ್ಲವೆ ಬಣ್ಣದ ಉಪಕರಣಗಳನ್ನು ಉಪಯೋಗಿಸಿದರೆ ಅದಕ್ಕೆ ಮಕ್ಕಳು ಸಹಜವಾಗಿ ಲಕ್ಷ್ಯಗೊಡುತ್ತಾರೆ. **ಹೀಗೆ ಪ್ರಯತ್ನವಿಲ್ಲದೆ ಮಕ್ಕಳು ಸಹಜವಾಗಿ ಕೊಡುವ ಅವಧಾನಕ್ಕೆ ಅನೈಚ್ಛಿಕ ಅವಧಾನ** ಎನ್ನುತ್ತಾರೆ.

**ಅವಧಾನಕ್ಕೆ ಅನುಕೂಲವಾದ ಸಂಗತಿಗಳು:—** ಮಕ್ಕಳ ಅವಧಾನವನ್ನು ದೊರಕಿಸಲು ಅನೇಕ ಸಾಧನಗಳುಂಟು. ಅವುಗಳಲ್ಲಿ ಮುಖ್ಯವಾದವುಗಳನ್ನು ಕೆಳಗೆ ಕೊಟ್ಟಿದೆ.

೧ ಗೊತ್ತಿದ್ದ ಸಂಗತಿಯಿಂದ ಹೊಸ ಸಂಗತಿಯ ಕಡೆಗೆ ಸಾಗುವದು.

೨ ಪಾಠದಲ್ಲಿ ಚಿತ್ರ, ಮಾದರಿ ಮುಂತಾದ ಚಿತ್ತಾಕರ್ಷಕ ಉಪಕರಣಗಳನ್ನು ಉಪಯೋಗಿಸುವದು.

೩ ಪಾಠಕ್ಕೆ ಸಂಬಂಧಿಸಿದ ಯಾವದೊಂದು ಚಟುವಟಿಕೆಯನ್ನು ಮಕ್ಕಳಿಗೆ ಮಾಡಹಚ್ಚುವದು.

೪ ಪಾಠಕ್ರಮದಲ್ಲಿ ಪ್ರಶ್ನೋತ್ತರಗಳ ಮೂಲಕ ಮಕ್ಕಳ ಸಹಾಯವನ್ನು ಹೆಚ್ಚು ಹೆಚ್ಚಾಗಿ ದೊರಕಿಸುವದು.

೫ ಒಮ್ಮೊಮ್ಮೆ ಪುನರಾವರ್ತನ ಮಾಡುವದು.

೬ ಆಯಾಸದ ನಿಯಮಗಳನ್ನು ಲಕ್ಷಿಸಿ ವೇಳಾಪತ್ರಿಕೆಯನ್ನು ಸಿದ್ಧಗೊಳಿಸುವದು.

ಮಕ್ಕಳ ಅವಧಾನವನ್ನು ದೊರಕಿಸುವ ಈ ಎಲ್ಲ ಸಾಧನಗಳಿಗಿಂತ ಆಸಕ್ತಿಯು ಅತ್ಯಂತ ಮಹತ್ತ್ವವಾದುದು. ಯಾವದೊಂದು ವಿಷಯವು ಪ್ರತ್ಯಕ್ಷವಾಗಿ ಇಲ್ಲವೆ ಅಪ್ರತ್ಯಕ್ಷವಾಗಿ ತಮ್ಮ ಜೀವನಕ್ಕೆ ಸಂಬಂಧಿಸಿರುವದೆಂದು ಮಕ್ಕಳಿಗೆ ಮನವರಿಕೆಯಾದರೆ ಅವರಿಗೆ ಆ ವಿಷಯದಲ್ಲಿ ಆಸಕ್ತಿ ಹುಟ್ಟುವದು. ಆದುದರಿಂದ ಯಾವದೊಂದು ವಿಷಯವನ್ನು ಕಲಿಸುವಾಗ ಆ ವಿಷಯವು ಮಕ್ಕಳ ಜೀವನಕ್ಕೆ ಹೇಗೆ ಸಂಬಂಧಿಸಿರುವದೆಂಬುದನ್ನು

ಶಿಕ್ಷಕನು ಮೇಲಿಂದ ಮೇಲೆ ಅವರ ನಿದರ್ಶನಕ್ಕೆ ತಂದು ಕೊಡಬೇಕು. ಎಂದರೆ, ಕಲಿಸುವ ವಿಷಯವು ಯಾವ ರೀತಿಯಿಂದ ಮಕ್ಕಳಿಗೆ ಪ್ರಯೋಜನಕಾರಿಯಾಗಿರುವದೆಂಬುದನ್ನು ತಿಳಿಸಿ ಕೊಡಬೇಕು. ಇನ್ನು ಚಿಕ್ಕ ಮಕ್ಕಳ ಆಸಕ್ತಿಗಳು ಅವರ ಸಹಜ ಪ್ರವೃತ್ತಿಗಳಿಗೆ ಸಂಬಂಧಿಸಿರುವದರಿಂದ ಜಿಜ್ಞಾಸೆ, ಸಂಪಾದನೆ, ರಚನೆ, ಕೃತಿ-ಪ್ರೇಮ ಮುಂತಾದ ಸಹಜ ಪ್ರವೃತ್ತಿಗಳನ್ನು ಅವರ ವಿದ್ಯಾಭ್ಯಾಸದಲ್ಲಿ ಹೇರಳವಾಗಿ ಉಪಯೋಗಿಸಿ ಕೊಳ್ಳಬೇಕು.

**ಅವಧಾನಕ್ಕೆ ಪ್ರತಿಕೂಲವಾದ ಸಂಗತಿಗಳು :—** ಈ ಸಂದರ್ಭಗಳಲ್ಲಿ ಅವಧಾನಕ್ಕೆ ಪ್ರತಿಕೂಲವಾದ ಹಲವು ಮುಖ್ಯ ಸಂಗತಿಗಳನ್ನು ನಾವು ತಿಳಿದುಕೊಳ್ಳುವದು ಅಗತ್ಯ. ಅವು ಯಾವವೆಂದರೆ:—

೧ ಬೇನೆ ಬೇಸರಿಕೆಗಳಿಂದುಂಟಾದ ಶಾರೀರಿಕ ಪೀಡೆಗಳು.

೨ ಮನೆಯವರ ಉಪದ್ರವ, ಆಶಾಭಂಗ, ಚಿಂತೆ ಮುಂತಾದವುಗಳಿಂದ ಉಂಟಾದ ಮಾನಸಿಕ ಅಸ್ವಸ್ಥತೆ.

೩ ಅನಾರೋಗ್ಯಕರವಾದ ಶಾಲೆಯ ಪರಿಸ್ಥಿತಿ.

೪ ಶಿಕ್ಷಕನ ವಿಲಕ್ಷಣವಾದ ನಡೆನುಡಿಗಳು.

೫ ಒಂದೇ ವರ್ಗದಲ್ಲಿ ಮಂದಬುದ್ಧಿಯುಳ್ಳವರೂ ಕುಶಾಗ್ರಬುದ್ಧಿಯುಳ್ಳವರೂ ಪೋಕರಿಗಳೂ ತುಂಟರೂ ಒತ್ತಟ್ಟಿಗೆ ಸೇರಿರುವದು.

೬ ಮಕ್ಕಳ ಯೋಗ್ಯತೆಯನ್ನು ಮೀರಿದ ವಿಷಯಗಳು ಮತ್ತು ಅವರ ಯೋಗ್ಯತೆಗೆ ಗಮನ ಕೊಡದೆ ಕಲಿಸುವ ಕ್ರಮ.

ಮೇಲೆ ಹೇಳಿದ ಸಂಗತಿಗಳನ್ನೆಲ್ಲ ಗಮನಕ್ಕೆ ತಂದು ಶಿಕ್ಷಕನು ಅವಧಾನವನ್ನು ದೊರಕಿಸಲಿಕ್ಕೆ ಅಗತ್ಯವಿದ್ದ ಉಪಾಯಗಳನ್ನು ಕೈಕೊಳ್ಳಬೇಕು. ಸಾಮಾನ್ಯವಾಗಿ ಅವನು ಮೊದಮೊದಲು ಮಕ್ಕಳ ಅನೈಚ್ಛಿಕ ಅವಧಾನಕ್ಕೆ ಕೈಹಾಕಿ ಕ್ರಮೇಣ ಅವರ ಐಚ್ಛಿಕ ಅವಧಾನವನ್ನು ದೊರಕಿಸಲು ಪ್ರಯತ್ನಿಸಬೇಕು. ಅರ್ಥಾತ್, ಅವನು ಮಕ್ಕಳಲ್ಲಿ ಹಲವು ನಿರಂತರವಾದ ಆಸಕ್ತಿಗಳನ್ನೂ ಅಭಿರುಚಿಗಳನ್ನೂ ನೆಲೆಗೊಳಿಸಬೇಕು.

# ೩ ಕಲಿಸುವ ತತ್ತ್ವಗಳು

ಕಲಿಸುವಿಕೆಯು ಕ್ರಮಬದ್ಧವಾಗಿರಬೇಕು. ಪ್ರತಿಯೊಂದು ಕ್ರಮಕ್ಕೆ ಹಲವು ವಿಶಿಷ್ಟ ತತ್ತ್ವಗಳ ಅಥವಾ ನಿಯಮಗಳ ಆಧಾರವಿರುವದುಂಟು. ಕಲಿಸುವ ಕ್ರಮವೂ ಹಲವು ತತ್ತ್ವಗಳನ್ನು ಒಳಗೊಂಡಿದೆ. ಅವುಗಳಲ್ಲಿ ಮುಖ್ಯವಾದವುಗಳನ್ನು ಇಲ್ಲಿ ವಿವರಿಸಲಾಗಿದೆ. ಅವುಗಳ ಅರ್ಥವು ಚನ್ನಾಗಿ ಮನನವಾಗದ ಹೊರತು ಅವು ಸಾಕಷ್ಟು ಉಪಯುಕ್ತವಾಗಲಾರವು.

**೧. ಗೊತ್ತಿದ್ದ ಸಂಗತಿಯಿಂದ ಗೊತ್ತಿಲ್ಲದ ಸಂಗತಿಗೆ ಸಾಗು :—** ಹೊಸ ವಿಷಯವನ್ನು ಮಕ್ಕಳ ಪೂರ್ವಜ್ಞಾನಕ್ಕೆ ಸಂಬಂಧಿಸಬೇಕು ಎಂಬುದೇ ಈ ತತ್ತ್ವದ ತಿರುಳು. ಮಕ್ಕಳಿಗೆ ಗೊತ್ತಿದ್ದ ಸಂಗತಿಗಳನ್ನು ಅವರ ಸ್ಮರಣೆಗೆ ತರುವದೇನೋ ಸುಲಭಸಾಧ್ಯ; ಆದರೆ ಅವುಗಳಲ್ಲಿ ಅವರು ಅಭಿರುಚಿಯನ್ನು ತೋರಿಸಲಾರರು. ಒಮ್ಮೊಮ್ಮೆ ಹೊಸ ಸಂಗತಿಗಳನ್ನು ಮಕ್ಕಳೆದುರಿಗೆ ಇಡುವದರಿಂದ ಅವರು ಅವುಗಳಲ್ಲಿ ಆಸಕ್ತಿಯನ್ನು ತೋರಿಸುತ್ತಾರೆ. ಹೊಸ ಸಂಗತಿಗಳಲ್ಲಿ ಚಿತ್ತಾಕರ್ಷತೆ ಹೆಚ್ಚು. ಆದರೆ ಹೊಸ ಸಂಗತಿಗಳನ್ನು ಮಕ್ಕಳು ಚನ್ನಾಗಿ ಕಲಿಯಬೇಕಾದರೆ ಅವರಿಗೆ ಮೊದಲೇ ಗೊತ್ತಿದ್ದ ಸಂಗತಿಗಳಿಗೆ ಅವುಗಳನ್ನು ಜೋಡಿಸಬೇಕಾಗುವದು. ಆದುದರಿಂದ ಮಕ್ಕಳಿಗೆ ಗೊತ್ತಿದ್ದ ಸಂಗತಿಗಳಿಂದ ಶಿಕ್ಷಕನು ಪ್ರಾರಂಭಿಸಿ ಹೊಸ ಸಂಗತಿಗಳನ್ನು ಅವುಗಳಿಗೆ ಕ್ರಮೇಣ ಜೋಡಿಸುತ್ತ ಹೋಗುವದು ವಿಹಿತವು. ಪಾಠವು ಚಿತ್ತಾಕರ್ಷಕವಾಗಬೇಕಾದರೆ ಅದರಲ್ಲಿ ಹಳೆ, ಹೊಸ ಸಂಗತಿಗಳು ಜತೆಯಲ್ಲಿ ಸೇರಿರಬೇಕು. ಉದಾಹರಣಾರ್ಥವಾಗಿ: ಇತಿಹಾಸ ಪಾಠದಲ್ಲಿ ಮಕ್ಕಳಿಗೆ ಗೊತ್ತಿದ್ದ ಕಥೆಗಳಿಂದ ಇಲ್ಲವೆ ಸಂಗತಿಗಳಿಂದ ಪ್ರಾರಂಭಿಸಿ ಬಳಿಕ ಹೊಸ

ಸಂಗತಿಗಳನ್ನು ಹೇಳಬೇಕು. ಭೂಗೋಲ ವಿಷಯವನ್ನು ಅವರಿಗೆ ಗೊತ್ತಿದ್ದ ಪ್ರಕೃತಿ ಸನ್ನಿವೇಶಗಳಿಂದ ಪ್ರಾರಂಭಿಸಬೇಕು. ಗಣಿತದಲ್ಲಂತೂ ಒಂದೊಂದು ಹೊಸ ವಿಷಯವು ಹಿಂದೆ ತಿಳಿದ ವಿಷಯದ ತಳಹದಿಯ ಮೇಲೆಯೇ ಸಾಗಬೇಕಾಗುವದು.

೨. **ಸುಲಭದಿಂದ ಕಠಿಣಕ್ಕೆ ಸಾಗು**:— ಮಕ್ಕಳಿಗೆ ಯಾವದೊಂದು ವಿಷಯದ ಸುಲಭವಾದ ಭಾಗಗಳು ತಿಳಿದ ಹೊರತು ಅವರಿಗೆ ಅವರ ಕಠಿಣವಾದ ಭಾಗಗಳು ತಿಳಿಯಲಾರವು. ಗಣಿತ ಪಾಠದಲ್ಲಿ ಮೊದಲಿನ ನಾಲ್ಕು ಸಾಮಾನ್ಯ ವಿಧಿಗಳಿಂದ ಪ್ರಾರಂಭಿಸಿ ಕಠಿಣವಾದ ಲೆಕ್ಕಗಳನ್ನು ಕಲಿಸಬೇಕು. ಗದ್ಯಪದ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಓದು ಬರೆಹಗಳನ್ನು ಕಲಿಸಬೇಕು. ಈ ನಿಯಮವನ್ನು ಬಳಿಕೆಯಲ್ಲಿ ತರುವಾಗ ಕೆಲವು ತೊಂದರೆಗಳು ಸಂಭವಿಸುವದುಂಟು. ಮಕ್ಕಳಿಗೆ ಸುಲಭವಾದ ಭಾಗಗಳು ಯಾವವು, ಕಠಿಣವಾದ ಭಾಗಗಳು ಯಾವವು ಎಂಬುದನ್ನು ನಿಷ್ಕರ್ಷಿಸುವದು ಬಲು ಕಠಿಣ. ಅಕ್ಷರಗಳಿಂದ ಪ್ರಾರಂಭಿಸಿ ಶಬ್ದಗಳನ್ನು ಕಲಿಸುವದು ತರ್ಕಬದ್ಧವಾದ ಕ್ರಮವಾಗಿದ್ದರೂ ಶಬ್ದಗಳನ್ನು ಮೊದಲು ಕಲಿತುಕೊಂಡು ಬಳಿಕ ಅಕ್ಷರಗಳನ್ನು ಕಲಿಯುವದು ಮಕ್ಕಳಿಗೆ ಸುಲಭವಾಗುತ್ತದೆ. ಸುಲಭವೆಂದರೆ ಶಿಕ್ಷಕರಿಗೆ ಸುಲಭವಾದದ್ದಲ್ಲ; ಮಕ್ಕಳಿಗೆ ಸುಲಭವಾದದ್ದು. ಮಕ್ಕಳಿಗೆ ಸುಲಭವಾದ ಕ್ರಮವೇ ಯೋಗ್ಯವಾದ ಕ್ರಮ. ಅದುವೆ ಸ್ವಾಭಾವಿಕವಾದ ಕ್ರಮ.

೩. **ಮೂರ್ತದಿಂದ ಅಮೂರ್ತಕ್ಕೆ ಸಾಗು**:— ಕಣ್ಣಿಗೆ ಕಾಣುವ ಹಾಗು ಇತರ ಇಂದ್ರಿಯಗಳಿಗೆ ಗೋಚರವಾಗುವ ಮೂರ್ತ ವಸ್ತುಗಳಿಂದ ಮಕ್ಕಳಿಗೆ ಭಾವಕ್ಕೆ ಮಾತ್ರ ಹೊಳೆಯುವ ಕಲ್ಪನೆಗಳನ್ನು ಮಾಡಿಕೊಡಬೇಕು. ಆರಂಭದಲ್ಲಿ ಅಂಕೆ-ಸಂಖ್ಯೆಗಳ ಜ್ಞಾನವು ಗುಂಡು ಗೋಲಿ ಮುಂತಾದ ಮೂರ್ತವಸ್ತುಗಳ ಸಹಾಯದಿಂದಲೇ ಆಗತಕ್ಕದ್ದು. ಹಸರು, ಕೆಂಪು, ಹಳದಿ ಮುಂತಾದ ಭಾವನಾಮಗಳನ್ನೂ ಆಯಾ ಬಣ್ಣದ ವಸ್ತುಗಳನ್ನೂ ತೋರಿಸಿ ಕಲಿಸಬೇಕು. ಆದರೆ ಮಕ್ಕಳಿಗೆ ಒಮ್ಮೆ ಭಾವವಾಚಕ ಸಂಗತಿಗಳು ತಿಳಿದಮೇಲೆ ಮೂರ್ತ ವಸ್ತುಗಳ ಸಹಾಯವನ್ನು ತೆಗೆದುಕೊಳ್ಳುವದನ್ನು ಕ್ರಮೇಣ ಕಡಿಮೆ ಮಾಡಬೇಕು.

ಉದಾಹರಣಾರ್ಥವಾಗಿ: ಬೇರೀಜು ಕಲಿಸುವಾಗ ಕಡ್ಡಿ, ಗುಂಡು, ಗೋಲಿ ಮುಂತಾದ ಮೂರ್ತ ವಸ್ತುಗಳನ್ನು ಉಪಯೋಗಿಸಿಕೊಳ್ಳಬೇಕು; ಆದರೆ ಮಕ್ಕಳಿಗೆ ಒಮ್ಮೆ ಬೇರೀಜಿನ ರೀತಿಯು ತಿಳಿದ ಮೇಲೆ ಅವರು ಬೇರೀಜಿನ ಎಲ್ಲ ಲೆಕ್ಕಗಳನ್ನು ವಸ್ತುಗಳ ಸಹಾಯವಿಲ್ಲದೇ ಮಾಡುವ ರೂಢಿಯನ್ನು ಹಚ್ಚಬೇಕು. ಒಟ್ಟಿನಲ್ಲಿ, ಯಾವದೇ ಹೊಸ ವಿಷಯದ ಪಾಠವನ್ನು ಹೇಳುವಾಗ ಶಿಕ್ಷಕನು ಅಗತ್ಯವಿದ್ದ ಚಿತ್ರ, ನಕಾಶ, ಮಾದರಿ ಮುಂತಾದ ಉಪಕರಣಗಳನ್ನು ಹೇರಳವಾಗಿ ಉಪಯೋಗಿಸಬೇಕು.

೪. **ಪೃಥಕ್ಕರಣದಿಂದ ಸಂಸ್ಕರಣೆಗೆ ಸಾಗು:—** ಯಾವದೇ ವಿಷಯವನ್ನು ಕುರಿತು ಮಕ್ಕಳಿಗೆ ಮೊದಲು ಉಂಟಾಗುವ ಜ್ಞಾನವು ನಿಸ್ಪೃಷ್ಟವಾಗಿರುವದಿಲ್ಲ. ಇಂಥ ಜ್ಞಾನವನ್ನು ಸುಸಂಬದ್ಧವಾಗಿ ನಿಸ್ಪೃಷ್ಟಗೊಳಿಸುವದು ಶಿಕ್ಷಕನ ಕರ್ತವ್ಯ. ಅದರ ಸಲುವಾಗಿ ಶಿಕ್ಷಕನು ಯಾವದೊಂದು ಸಂಗತಿಯನ್ನು ಕುರಿತು ಮಕ್ಕಳಿಗೆ ಉಂಟಾದ ಜ್ಞಾನವನ್ನು ಪೃಥಕ್ಕರಿಸಿ ಅದರ ಬೇರೆಬೇರೆ ಅಂಗಗಳನ್ನು ಪ್ರತ್ಯೇಕವಾಗಿ ತಿಳಿಸಿ ಕೊಡಬೇಕು. ಬಳಿಕ ಎಲ್ಲ ಜ್ಞಾನಾಂಗಗಳ ಸಂಸ್ಕರಣ ಮಾಡಬೇಕು. ಹೀಗೆ ಮಾಡುವದರಿಂದ ಮಕ್ಕಳ ಜ್ಞಾನವು ಸ್ಫುಟವಾಗುವದಲ್ಲದೆ ಸುಸಂಬದ್ಧವಾದದ್ದೂ ಆಗುತ್ತದೆ. ಉದಾಹರಣಾರ್ಥವಾಗಿ: ನಾವು ಒಂದು ಕವಿತೆಯನ್ನು ಕಲಿಸಬೇಕಾಗಿದೆಯೆಂದು ತಿಳಿಯುವಾ. ಮಕ್ಕಳು ಅದನ್ನು ಮೊದಲು ಓದಿದಾಗ ಆ ಕವಿತೆಯಲ್ಲಿರುವ ವಿಷಯದ ಸಾಮಾನ್ಯ ಕಲ್ಪನೆ ಮಾತ್ರ ಅವರಿಗುಂಟಾಗುವದು. ಆದರೆ ಈ ಜ್ಞಾನವು ನಿಸ್ಪೃಷ್ಟವಿರುವದಿಲ್ಲ. ಕವಿತೆಯ ಸಂಪೂರ್ಣ ಜ್ಞಾನವು ಮಕ್ಕಳಿಗೆ ಉಂಟಾಗಬೇಕಾದರೆ ಶಿಕ್ಷಕನು ಅದರಲ್ಲಿರುವ ಎಲ್ಲ ವಿಷಯಾಂಗಗಳನು ವಿಂಗಡಿಸಿ ವಿಶದೀಕರಿಸಬೇಕಾಗುತ್ತದೆ. ಇಷ್ಟಕ್ಕೆ ಬಿಟ್ಟರೆ ಕವಿತೆಯ ಪರಿಪೂರ್ಣ ಜ್ಞಾನವಾಗಲಾರದು. ವಿಶದೀಕರಿಸಿದ ವಿಷಯಾಂಗಗಳನ್ನು ಪುನಃ ಏಕೀಕರಿಸಬೇಕಾಗುತ್ತದೆ.ಅಂದರೆ ಮಾತ್ರ ಆ ಕವಿತೆಯ ಬಗ್ಗೆ ಸಂಪೂರ್ಣ ಸುಸಂಬದ್ಧ ಹಾಗು ನಿಸ್ಪೃಷ್ಟವಾದ ಜ್ಞಾನವುಂಟಾಗುತ್ತದೆ. ಈ ತತ್ತ್ವವನ್ನು ಒಮ್ಮೊಮ್ಮೆ ಎರಡು ಭಾಗವಾಗಿ ಹೇಳುವದುಂಟು: "ಇಡಿಯದಿಂದ ಬಿಡಿಗಳಿಗೆ ಸಾಗು" ಮತ್ತು "ಬಿಡಿಗಳಿಂದ ಇಡಿಯದಕ್ಕೆ ಸಾಗು"

೫ **ಉದಾಹರಣೆಗಳಿಂದ** ಅಥವಾ **ವಿಶೇಷಗಳಿಂದ ಸಾಮಾನ್ಯಕ್ಕೆ ಸಾಗು :—** ವ್ಯಾಕರಣ, ವಿಜ್ಞಾನಶಾಸ್ತ್ರ, ಗಣಿತ ಮುಂತಾದ ವಿಷಯಗಳಿಗೆ ಸಂಬಂಧಿಸಿದ ನಿಯಮಗಳನ್ನು ಪ್ರತ್ಯಕ್ಷವಾಗಿ ಕಲಿಸದೆ ಮಕ್ಕಳು ಹಲವು ಉದಾಹರಣೆಗಳ ಮೂಲಕ ಅವುಗಳನ್ನು ಕಂಡುಕೊಳ್ಳುವಂತೆ ಮಾಡಬೇಕು.

೬ **ಸ್ವಾಭಾವಿಕ ಮಾರ್ಗವನ್ನು ಅನುಸರಿಸು :—** ಮಕ್ಕಳ ಶಾರೀರಕ, ಮಾನಸಿಕ ವಿಕಾಸದ ಸ್ವಾಭಾವಿಕ ನಿಯಮಗಳನ್ನೂ ಅವರು ಸಹಜವಾಗಿ ಕಲಿಯುವ ಕ್ರಮವನ್ನೂ ಅನುಲಕ್ಷಿಸಿ ಅಭ್ಯಾಸ ವಿಷಯಗಳನ್ನು ಕಲಿಸಬೇಕು— ಎಂಬುದೇ ಈ ತತ್ತ್ವದ ತಾತ್ಪರ್ಯ.

೭ **ಸ್ವೋದ್ಯಮವನ್ನು ಪ್ರೋತ್ಸಾಹಿಸು :—** ಮಕ್ಕಳು ಸ್ವಪ್ರಯತ್ನ, ಸ್ವೋದ್ಯಮಗಳಿಂದ ಕಲಿತ ಸಂಗತಿಗಳು ಮನಸ್ಸಿನಲ್ಲಿ ಸ್ಥಿರವಾಗಿ ಉಳಿಯುವದರಿಂದ ಅವರು ಅಭ್ಯಾಸ ವಿಷಯಗಳನ್ನು ತಮ್ಮಷ್ಟಕ್ಕೆ ತಾವೇ ತಿಳಿದುಕೊಳ್ಳಲು ಪ್ರಯತ್ನಿಸುವಂತೆ ಅವರಿಗೆ ಅವಕಾಶವನ್ನು ಕಲ್ಪಿಸಿಕೊಡಬೇಕು. ಹಾಗೆ ಮಾಡಿದರೆ ಮಕ್ಕಳಿಗೆ ಕಲಿಯತಕ್ಕ ವಿಷಯದಲ್ಲಿ ಬೇಸರವು ದೂರಾಗಿ ಆಸಕ್ತಿಯು ಹೆಚ್ಚಾಗುತ್ತದೆ. **ಮಾಡುತ್ತ ಕಲಿ** ಎಂಬ ತತ್ತ್ವದ ತಿರುಳೂ ಇದೇ.

೮ **ವಿಷಯಗಳನ್ನು ಅನುಬಂಧಿಸು :—** ಯಾವದೊಂದು ವಿಷಯವನ್ನು ಕಲಿಸುವಾಗ ಅದಕ್ಕೂ ಇತರ ವಿಷಯಗಳಿಗೂ ಇರುವ ನಿಕಟ ಸಂಬಂಧವನ್ನು ಸಾಧ್ಯವಿದ್ದಷ್ಟು ತೋರಿಸುತ್ತ ಹೋಗಬೇಕು. ಉದಾಹರಣೆಗಾಗಿ: ಐತಿಹಾಸಿಕ ಸಂಗತಿಗಳನ್ನು ಕಲಿಸುವಾಗ ಭೌಗೋಲಿಕ ಸಂಗತಿಗಳನ್ನೂ, ಭೌಗೋಲಿಕ ಸಂಗತಿಗಳನ್ನು ಕಲಿಸುವಾಗ ಐತಿಹಾಸಿಕ ಸಂಗತಿಗಳನ್ನೂ ಉಪಯೋಗಿಸಬೇಕು. ಹಾಗೆಯೇ ಪ್ರಕೃತಿ ವಿಜ್ಞಾನಕ್ಕೂ ಭೂಗೋಲಕ್ಕೂ ಪರಸ್ಪರ ಸಂಬಂಧವಿದೆ. ಭಾಷಾವಿಷಯಕ್ಕೂ ಇತಿಹಾಸಕ್ಕೂ ಸಂಬಂಧವನ್ನು ಮಾಡಬಹುದು. ಹೀಗೆ ವಿಷಯಗಳ ಅನ್ಯೋನ್ಯ ಸಂಬಂಧವನ್ನು ಮಕ್ಕಳಿಗೆ ತೋರಿಸಿಕೊಡುವದರಿಂದ ಮಕ್ಕಳಲ್ಲಿ ವಿವಿಧವಿಷಯಾಸಕ್ತಿ ಹುಟ್ಟಿಬೆಳೆಯುವದಲ್ಲದೆ ಜ್ಞಾನದ ಅಖಂಡತೆಯ ಕಲ್ಪನೆಯೂ ಅವರಿಗೆ ಉಂಟಾಗುತ್ತದೆ.

# ೪ ಕಲಿಸುವ ಸಾಮಾನ್ಯ ಪದ್ಧತಿಗಳು

ಸುಸಂಬದ್ಧವಾದ ಕ್ರಮಕ್ಕೆ ಪದ್ಧತಿ ಎನ್ನುತ್ತಾರೆ. ಶಿಕ್ಷಣ ತಜ್ಞರು ಕಲಿಸುವ ಅನೇಕ ಪದ್ಧತಿಗಳನ್ನು ವಿವೇಚಿಸಿದ್ದಾರೆ. ಅವುಗಳಲ್ಲಿ ಮಹತ್ತ್ವವಾದವುಗಳನ್ನು ಕೆಳಗೆ ವಿವರಿಸಿದೆ. ಬೇರೆ ಬೇರೆ ವಿಷಯಗಳನ್ನು ಕಲಿಸುವಾಗ ಬೇರೆ ಬೇರೆ ಪದ್ಧತಿಗಳನ್ನು ಉಪಯೋಗಿಸಬೇಕಾಗುತ್ತದೆ. ಒಮ್ಮೊಮ್ಮೆ ಒಂದೇ ಪಾಠದಲ್ಲಿ ಒಂದಾಗಲಿ ಒಂದಕ್ಕಿಂತ ಹೆಚ್ಚಾಗಲಿ ಪದ್ಧತಿಗಳನ್ನು ಉಪಯೋಗಿಸಬೇಕಾಗುತ್ತದೆ.

೧ **ವಿಗಮನ ಪದ್ಧತಿ :—** ಹಲವು ವಿಶಿಷ್ಟ ಸಂಗತಿಗಳ ನಿರೀಕ್ಷಣದಿಂದ ಒಂದು ಸಾಮಾನ್ಯ ನಿಯಮವನ್ನು ಕಟ್ಟುವ ಕ್ರಮಕ್ಕೆ ವಿಗಮನ ಪದ್ಧತಿ ಎನ್ನುತ್ತಾರೆ. ಉದಾಹರಣಾರ್ಥವಾಗಿ: ಗಣಿತ ಮತ್ತು ವ್ಯಾಕರಣ ಪಾಠಗಳಲ್ಲಿ ಅನೇಕ ಉದಾಹರಣೆಗಳನ್ನು ಪರೀಕ್ಷಿಸಿ, ವಿಜ್ಞಾನ ಶಾಸ್ತ್ರದ ಪಾಠಗಳಲ್ಲಿ ಹಲವು ಪ್ರಯೋಗಗಳನ್ನು ಮಾಡಿ, ಸಾಮಾನ್ಯ ನಿಯಮಗಳನ್ನು ಕಂಡು ಹಿಡಿಯಬಹುದು. ಇಂಥ ಪಾಠಗಳಲ್ಲಿ ಸಾಮಾನ್ಯ ನಿಯಮಗಳನ್ನು ಮಕ್ಕಳಿಂದಲೇ ಹೊರಡಿಸುವಂತೆ ಶಿಕ್ಷಕನು ಯತ್ನಿಸಬೇಕು; ಮತ್ತು ನಿಯಮವನ್ನು ಕಂಡು ಹಿಡಿಯುವದಕ್ಕಿಂತ ಪೂರ್ವದಲ್ಲಿ ಅವರು ಸಾಕಷ್ಟು ಉದಾಹರಣೆಗಳನ್ನು ಪರೀಕ್ಷಿಸುವಂತೆ ಮಾಡಬೇಕು.

೨ **ನಿಗಮನ ಪದ್ಧತಿ :—** ಸಾಮಾನ್ಯ ನಿಯಮದಿಂದ ವಿಶಿಷ್ಟ ಸಂಗತಿಗಳಿಗೆ ಸಾಗುವ ಕ್ರಮಕ್ಕೆ ನಿಗಮನ ಪದ್ಧತಿ ಎನ್ನುತ್ತಾರೆ. ಉದಾಹರಣಾರ್ಥವಾಗಿ, ಗಣಿತ ಹಾಗು ವ್ಯಾಕರಣ ಪಾಠಗಳಲ್ಲಿ ಮೊದಲು ನಿಯಮಗಳನ್ನು ಕಲಿತುಕೊಂಡು ಬಳಿಕ ಕಲಿತ ನಿಯಮವನ್ನು

ಅನೇಕ ಉದಾಹರಣೆಗಳಿಗೆ ಹಚ್ಚುತ್ತ ಹೋಗಬಹುದು. ಹಾಗೆಯೇ ವಿಜ್ಞಾನ ಶಾಸ್ತ್ರದ ಪಾಠದಲ್ಲಿ ಮೊದಲು ಶಾಸ್ತ್ರೀಯ ತತ್ತ್ವಗಳನ್ನು ಕಲಿತು ಬಳಿಕ ಅವುಗಳನ್ನು ವಿಶಿಷ್ಟ ಸಂಗತಿಗಳಿಗೆ ಹಚ್ಚಬಹುದು.

ವಿಗಮನ ಪದ್ಧತಿಯಲ್ಲಿ ಮಕ್ಕಳು ಸ್ವಪ್ರಯತ್ನದಿಂದ ಕಲಿಯುತ್ತಾರೆ. ಇವರಲ್ಲಿ ಮಕ್ಕಳಿಗೆ ಜ್ಞಾನವು ಸಾವಕಾಶವಾಗಿ ಉಂಟಾದರೂ ದೃಢವಾಗುತ್ತದೆ. ನಿಗಮನ ಪದ್ಧತಿಯಲ್ಲಿ ಮುಖ್ಯಾಂಶವನ್ನು ಶಿಕ್ಷಕನೇ ಹೇಳಬೇಕಾಮುದರಿಂದ ಅಲ್ಲಿ ಮಕ್ಕಳ ಸ್ವಪ್ರಯತ್ನ ಸ್ವಂತ ಪರೀಕ್ಷೆಗಳಿಗೆ ಅವಕಾಶವಿಲ್ಲ. ಎಷ್ಟೋಸಾರೆ ಶಿಕ್ಷಕನು ಇವೆರಡೂ ಪದ್ಧತಿಗಳನ್ನು ಸೇರಿಸಿಕೊಂಡು ಪಾಠವನ್ನು ಕಲಿಸಬೇಕಾಗುತ್ತದೆ. ಉದಾಹರಣೆಗಾಗಿ: ವ್ಯಾಕರಣ ಪಾಠದಲ್ಲಿ ಮೊದಲು ಕೆಲವು ಉದಾಹರಣೆಗಳಿಂದ ಒಂದು ಸಾಮಾನ್ಯ ನಿಯಮವನ್ನು ಕಟ್ಟುತ್ತೇವೆ. ಆಮೇಲೆ ಕಟ್ಟಿದ ನಿಯಮವನ್ನು ಇನ್ನಿತರ ಉದಾಹರಣೆಗಳಿಗೆ ಹಚ್ಚಿ ಅದನ್ನು ದೃಢೀಕರಿಸುತ್ತೇವೆ. ಇವೆರಡೂ ಪದ್ಧತಿಗಳನ್ನೊಳಗೊಂಡ ಕ್ರಮಕ್ಕೆ **ವಿಗಮನ-ನಿಗಮನ** ಪದ್ಧತಿ ಎಂದು ಹೇಳಬಹುದು.

೩ **ಹೇಳುವ ಪದ್ಧತಿ:**—ಈ ಪದ್ಧತಿಯು ಮೂರು ವಿಧವಾಗಿದೆ:

ಅ ಕಥಾರೂಪ :— ಶಿಕ್ಷಕನು ತಾನು ತಿಳಿಸಬೇಕಾದ ವಿಷಯವನ್ನು ಕಥೆಯ ರೂಪದಲ್ಲಿ ಹೇಳುವದು.

ಆ ವಿವರಣೆ :— ಗದ್ಯ ಪದ್ಯಗಳನ್ನು ಕಲಿಸುವಾಗ ಪ್ರತಿಯೊಂದು ವಾಕ್ಯದ ಅರ್ಥವನ್ನು ಸ್ಪಷ್ಟೀಕರಿಸುತ್ತ ಹೋಗುವದು.

ಇ ವ್ಯಾಖ್ಯಾನ :— ಯಾವದೊಂದು ವಿಷಯವನ್ನು ಕಲಿಸುವಾಗ ಅದಕ್ಕೆ ಸಂಬಂಧಿಸಿದ ಎಲ್ಲ ಸಂಗತಿಗಳನ್ನು ಸಂಗ್ರಹಿಸಿ ಅವುಗಳನ್ನು ಸುಸಂಬದ್ಧವಾಗಿ ಹೇಳುವದು.

ಈ ಮೂರು ವಿಧಾನಗಳಲ್ಲಿ ಸಾಮಾನ್ಯವಾಗಿ ಮೊದಲನೆಯದು ಚಿಕ್ಕ ಮಕ್ಕಳಿಗೆ, ಎರಡನೆಯದು ಮತ್ತು ಮೂರನೆಯದು ದೊಡ್ಡ ಮಕ್ಕಳಿಗೆ ಉಪಯುಕ್ತವಾಗಿರುವವು. ಹೊಸ ವಿಷಯವನ್ನು ಮಕ್ಕಳಿಂದ ಹೊರಡಿಸುವದು ಅಸಾಧ್ಯವಾದುದರಿಂದ ಅದನ್ನು ಹೇಳಲೇಬೇಕಾಗು

ತ್ತದೆ. ಇದಲ್ಲದೆ ಕಠಿಣ ಸಂಗತಿಗಳ ಅರ್ಥವನ್ನು ವಿವರಿಸುವಾಗ, ವರ್ಣನಾತ್ಮಕ ಸಂಗತಿಗಳನ್ನು ಶಬ್ದಗಳಿಂದ ಚಿತ್ರಿಸುವಾಗ, ಹಾಗು ಮಕ್ಕಳಲ್ಲಿ ಭಾವೋದ್ರೇಕವನ್ನುಂಟುಮಾಡುವಾಗ ಹೇಳುವ ಪದ್ಧತಿಯು ಅತ್ಯಾವಶ್ಯಕ. ಆದರೆ ಯಾವಾಗ, ಏನನ್ನು, ಮತ್ತು ಹೇಗೆ, ಹೇಳಬೇಕು ಎಂಬುದು ಶಿಕ್ಷಕನಿಗೆ ಚನ್ನಾಗಿ ಗೊತ್ತಿಲ್ಲದೆ ಹೋದರೆ ಹೇಳುವ ಪದ್ಧತಿಯು ಫಲಕಾರಿಯಾಗಲಾರದು.

ಹೇಳುವ ಪದ್ಧತಿಯಲ್ಲಿ ಕೆಳಗೆ ಕಾಣಿಸಿದ ದೋಷಗಳಿವೆ.

೧ ಎಲ್ಲ ಸಂಗತಿಗಳನ್ನು ಶಿಕ್ಷಕನೇ ಹೇಳುವದರಿಂದ ಮಕ್ಕಳ ಸ್ವಪ್ರಯತ್ನ ಸ್ವೋದ್ಯಮಗಳಿಗೆ ಅವಕಾಶವಿಲ್ಲ.

೨ ಮಕ್ಕಳ ಶ್ರವಣೇಂದ್ರಿಯಕ್ಕಲ್ಲದೆ ಉಳಿದ ಯಾವ ಇಂದ್ರಿಯಗಳಿಗೂ ಕೆಲಸವಿಲ್ಲ.

೩ ಮಕ್ಕಳಿಗೆ ಸ್ವಂತ ಚಟುವಟಿಕೆಗೆ ಆಸ್ಪದವಿಲ್ಲದಿರುವದರಿಂದ ಅವರ ಅವಧಾನವು ಸಡಿಲಾಗುವದು.

೪ ಸ್ಮೃತಿಯೊಂದನ್ನು ಬಿಟ್ಟು ಉಳಿದ ಬುದ್ಧಿವ್ಯಾಪಾರಗಳಿಗೆ ಸ್ಥಾನವಿಲ್ಲ.

೫ ಈ ಪದ್ಧತಿಯಲ್ಲಿ ಕಲಿಯುವ ಕ್ರಮಕ್ಕಿಂತ ಕಲಿಸುವ ಕ್ರಮಕ್ಕೆ ಹೆಚ್ಚು ಪ್ರಾಮುಖ್ಯವಿದೆ.

**೪ ಪ್ರಶ್ನೋತ್ತರ ಪದ್ಧತಿ :—** ಯಾವದೊಂದು ವಿಷಯವನ್ನು ಪ್ರಶ್ನೋತ್ತರಗಳಿಂದ ಕಲಿಸುವ ಕ್ರಮಕ್ಕೆ ಪ್ರಶ್ನೋತ್ತರ ಪದ್ಧತಿ ಎಂಬ ಹೆಸರು. ಇದು ಅತಿ ಮಹತ್ತ್ವವಾದುದು. ಇದರಿಂದ ಅನೇಕ ಪ್ರಯೋಜನಗಳುಂಟು.

೧ ಇದು ಮಕ್ಕಳಿಗೆ ಅನುಮಾನ-ನಿರ್ಣಯಗಳನ್ನು ಮಾಡಹಚ್ಚಿ ಅವರ ಮಾನಸಿಕ ಚಟುವಟಿಕೆಯನ್ನು ಉತ್ತೇಜನಗೊಳಿಸುವದು.

೨ ಇದರಿಂದ ಮಕ್ಕಳ ಅವಧಾನವನ್ನು ದೊರಕಿಸಲು ಸುಲಭ ವಾಗುತ್ತದೆ.

೩ ಮಕ್ಕಳ ಬುದ್ಧಿಯ ಮಟ್ಟವನ್ನೂ ಅವರಿಗೆ ತಿಳಿದ ತಿಳಿಯದ ಸಂಗತಿಗಳನ್ನೂ ಗೊತ್ತುಹಚ್ಚಲು ಸಾಹಾಯ್ಯವಾಗುತ್ತದೆ.

೪ ಕಲಿಸಿದ ಜ್ಞಾನವನ್ನು ದೃಢೀಕರಿಸಲು ನೆರವಾಗುತ್ತದೆ.

೫ ಇದು ಕಲಿಸುವ ಕ್ರಮಕ್ಕಿಂತ ಕಲಿಯುವ ಕ್ರಮಕ್ಕೆ ಹೆಚ್ಚು ಮಹತ್ತ್ವವನ್ನು ಕೊಡುವದರಿಂದ ಹೆಚ್ಚು ಪರಿಣಾಮಕಾರಕವಾಗುತ್ತದೆ.

ಹೊಸ ವಿಷಯಗಳನ್ನು ಯಾವಾಗಲೂ ಪ್ರಶ್ನೋತ್ತರ ಪದ್ಧತಿಯಿಂದ ಕಲಿಸುವದು ಸುಲಭ ಸಾಧ್ಯವಲ್ಲ. ಆಗಾಗ್ಗೆ ಹೇಳುವ ಪದ್ಧತಿಯನ್ನೂ ಉಪಯೋಗಿಸಲೇ ಬೇಕಾಗುತ್ತದೆ. ಪಾಠವು ಚನ್ನಾಗಿ ಸಾಗಬೇಕಾದರೆ ಹೇಳುವ ಪದ್ಧತಿಯನ್ನೂ ಪ್ರಶ್ನೋತ್ತರ ಪದ್ಧತಿಯನ್ನೂ ಜತೆ ಜತೆಯಾಗಿ ಉಪಯೋಗಿಸಿಕೊಳ್ಳಬೇಕಾಗುತ್ತದೆ. ಇವೆರಡೂ ಪದ್ಧತಿಗಳನ್ನೊಳಗೊಂಡ ಕ್ರಮಕ್ಕೆ **ವಿವೇಚನಾ ಪದ್ಧತಿ** ಎಂಬ ಹೆಸರು.

**೫ ನಟನಾ ಪದ್ಧತಿ:—** ಸಂಭಾಷಣೆ ಹಾಗು ತಕ್ಕ ಅಭಿನಯ ಇವುಗಳ ಮೂಲಕ ಪಾಠ ಸಾಗಿಸುವ ಕ್ರಮಕ್ಕೆ ನಟನಾ ಪದ್ಧತಿ ಎನ್ನುತ್ತಾರೆ. ವಿಶೇಷವಾಗಿ ಸಾಹಿತ್ಯ–ಇತಿಹಾಸಗಳ ಪಾಠಗಳಲ್ಲಿ, ನಟನೆಯ ಮೂಲಕ ವಿಷಯವನ್ನು ಕಲಿಸುವದು ಸುಲಭವೂ ಪರಿಣಾಮಕಾರಿಯೂ ಆಗುತ್ತದೆ. ಒಮ್ಮೊಮ್ಮೆ ಗಣಿತ ಪಾಠದಲ್ಲಿಯೂ ಸಹ ಮಕ್ಕಳಿಗೆ ಅಂಗಡಿಕಾರ-ಗಿರಾಕಿಗಳ ನಟನೆಮಾಡಹಚ್ಚಿ ಎಷ್ಟೋ ಸಂಗತಿಗಳನ್ನು ಕಲಿಸಬಹುದು. ಈ ಪದ್ಧತಿಯು ಮಕ್ಕಳಿಗೆ ಮನರಂಜನೆಯನ್ನುಂಟುಮಾಡಿ ಪಾಠದಲ್ಲಿ ಹಾಗು ವಿಷಯದಲ್ಲಿ ಅವರ ಅಭಿರುಚಿಯನ್ನು ಅಭಿವೃದ್ಧಿಗೊಳಿಸುತ್ತದೆ. ಆದರೆ ಇದನ್ನು ಯಾವಾಗಲೂ ಉಪಯೋಗಿಸುವದು ಸಾಧ್ಯವಿಲ್ಲ.

**೬ ಕೃತಿಪ್ರಧಾನ ಪದ್ಧತಿ:**— ಈ ಪದ್ಧತಿಯು "ಮಾಡುತ್ತ ಕಲಿ" ಎಂಬ ತತ್ತ್ವವನ್ನು ಒಳಗೊಂಡಿದೆ. ಕೃತಿಪ್ರೇಮವು ಮಕ್ಕಳ ಸಹಜ ಪ್ರವೃತ್ತಿಯಾದುದರಿಂದ ಓಡಾಡುವದು, ಜಿಗಿದಾಡುವದು, ಒದರುವದು, ಏನಾದರೊಂದು ಕೃತಿಯನ್ನು ಮಾಡುವದು, ಇತ್ಯಾದಿಗಳು ಅವರ ಸ್ವಾಭಾವಿಕ ಚಟುವಟಿಕೆಗಳಾಗಿವೆ. ಆದುದರಿಂದ ಶಿಕ್ಷಕನು ಮಕ್ಕಳಿಗೆ ಚಟುವಟಿಕೆಗಳನ್ನು ಮಾಡಹಚ್ಚಿ ಅವರ ಈ ಪ್ರವೃತ್ತಿಗೆ ಸಂಧಿಯನ್ನು ಒದಗಿಸಿಕೊಡಬೇಕು. ಕೃತಿಗಳನ್ನು ಮಾಡುವದರಿಂದ ಮಕ್ಕಳ ಜ್ಞಾನವು ಬೆಳೆಯುತ್ತಹೋಗಿ ಅವರಲ್ಲಿ ಕೆಲಸ ಮಾಡುವ ಸಾಮರ್ಥ್ಯವೂ ಚಾತುರ್ಯವೂ ಉಂಟಾಗುವವು. ಇತಿಹಾಸ ಪಾಠಗಳಲ್ಲಿ ಕಾಲರೇಷೆ, ವಂಶಾವಳಿ ಪಟಗಳನ್ನು ತಯಾರಿಸುವದು ಮತ್ತು ನಕಾಶದಲ್ಲಿ ರಾಜ್ಯ ವಿಸ್ತಾರವನ್ನು ತೋರಿಸುವದು; ಭೂಗೋಲ ಪಾಠಗಳಲ್ಲಿ ಸ್ವಾಭಾವಿಕ ವಿಭಾಗ, ಔದ್ಯೋಗಿಕ ಕೇಂದ್ರ, ಮಹತ್ತ್ವವಾದ ಪಟ್ಟಣ, ಬಂದರ, ರೇಲ್ವೆಮಾರ್ಗ, ವಿಮಾನಮಾರ್ಗ ಮುಂತಾದ ಅನೇಕ ಸಂಗತಿಗಳನ್ನು ನಕಾಶದಲ್ಲಿ ತುಂಬುವದು; ವಿಜ್ಞಾನಶಾಸ್ತ್ರದ ಪಾಠಗಳಲ್ಲಿ ಪ್ರಯೋಗ ಗಳನ್ನು ಕೈಕೊಳ್ಳುವದು; ಇತ್ಯಾದಿ ಸ್ವಂತ ಕೃತಿಗಳಿಂದ ಪಾಠಗಳಲ್ಲಿ ಮಕ್ಕಳ ಅಭಿರುಚಿಯು ಹೆಚ್ಚಾಗಿ ಅವರ ವಿಷಯಜ್ಞಾನವು ಸ್ಪಷ್ಟವಾಗು ವದು; ಮನದಟ್ಟಾಗುವದು.

**೭ ಶೋಧಕ ಪದ್ಧತಿ :**— ಶಿಕ್ಷಕನು ತೀರ ಕಡಿಮೆ ಮಾತಾಡಿ ಮಕ್ಕಳು ಹೊಸ ಸಂಗತಿಗಳನ್ನು ತಾವೇ ಶೋಧಿಸುವಂತೆ ಪ್ರೋತ್ಸಾಹಿಸ ಬೇಕೆಂದು **ಹರ್ಬರ್ಟ ಸ್ಪೆನ್ಸರನು** ಒಂದೆಡೆಗೆ ಹೇಳಿದ್ದಾನೆ. ಈ ತತ್ತ್ವವನ್ನೇ ಮುಂದುವರಿಸಿ ಪ್ರೊಫೆಸರ **ಆರ್ಮಸ್ಟ್ರಾಂಗ** ಎಂಬ ಆಂಗ್ಲೇಯ ಶಿಕ್ಷಣ ತಜ್ಞನು **ಹ್ಯೂರಿಸ್ಟಿಕ್** ಅಥವಾ **ಶೋಧಕ ಪದ್ಧತಿ** ಎಂಬ ಒಂದು ಹೊಸ ಪದ್ಧತಿಯನ್ನು ಕಲ್ಪಿಸಿದನು. "ಹ್ಯೂರಿಸ್ಟಿಕ" ಈ ಶಬ್ದವು "ಹ್ಯೂರಿಸ್ಕೋ" — ನನ್ನಷ್ಟಕ್ಕೇ ನಾನೇ ಶೋಧಿಸು ತ್ತೇನೆ, ಕಂಡು ಹಿಡಿಯುತ್ತೇನೆ — ಎಂಬ ಗ್ರೀಕ ಶಬ್ದದಿಂದ ಬಂದಿದೆ. ಈ ಪದ್ಧತಿಯಲ್ಲಿ ಶಾಸ್ತ್ರೀಯ ವಿಷಯವನ್ನು ಕಲಿಯುವ ವಿದ್ಯಾರ್ಥಿಯು

ಅದನ್ನು ಮೂಲ ಶೋಧಕನ ದೃಷ್ಟಿಯಿಂದ ಕಲಿಯುವನು— ಅರ್ಥಾತ್, ಅವನ ಮನಸ್ಸಿನ ಒಲವು ಶೋಧಿಸುವದರ ಕಡೆಗೆ ಇರುವದು. ಅವನು ಶೋಧಕನಂತೆ ವಿಚಾರ-ನಿರ್ಣಯಗಳನ್ನು ಮಾಡಹತ್ತುವನು. ಮಕ್ಕಳು ಕಂಡುಹಿಡಿಯಬೇಕಾದ ಸಂಗತಿಗೆ ಅಗತ್ಯವಿರುವ ಎಲ್ಲ ಸಾಧನ-ಸಾಮಗ್ರಿಗಳನ್ನು ಅವರಿಗೆ ಒದಗಿಸಿ ಕೊಡುವದು ಮಾತ್ರ ಶಿಕ್ಷಕನ ಕರ್ತವ್ಯವು. ಅವನು ಅವಶ್ಯಬಿದ್ದಾಗ ಅವರಿಗೆ ಸಲಹೆಕೊಟ್ಟು ಮಾರ್ಗತೋರಿಸಬೇಕು. ಆದರೆ ಅವರು ಕಂಡುಹಿಡಿಯಬೇಕಾದ ಸಂಗತಿಯನ್ನು ಮಾತ್ರ ಹೇಳಿ ಬಿಡಬಾರದು.

ಶೋಧಕನ ಪದ್ಧತಿಯನ್ನು ಮೊಟ್ಟ ಮೊದಲು ವಿಜ್ಞಾನಶಾಸ್ತ್ರದ ಪಾಠಗಳಲ್ಲಿ ಮಾತ್ರ ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಆದರೆ ಇದನ್ನು ಎಲ್ಲ ಅಭ್ಯಾಸ ವಿಷಯಗಳನ್ನು ಕಲಿಸುವಾಗ ಉಪಯೋಗಿಸಿಕೊಳ್ಳುವದು ಸಾಧ್ಯವಿದೆಯೆಂಬುದು ಕೆಳಗಿನ ಉದಾಹರಣೆಗಳಿಂದ ಸ್ಪಷ್ಟವಾಗುವದು. ಕವಿತಾ ಪಾಠದಲ್ಲಿ ವಿಷಯ, ಛಂದಸ್ಸು, ಭಾಷೆ ಇವುಗಳ ದೃಷ್ಟಿಯಿಂದ ಎರಡು ಕವಿತೆಗಳನ್ನು ತುಲನೆ ಮಾಡಲಿಕ್ಕೆ ಹಚ್ಚಬಹುದು; ಇತಿಹಾಸ ಪಾಠದಲ್ಲಿ ಯಾವದೊಂದು ರಾಜ್ಯಕ್ರಾಂತಿಯ ಕಾರಣಗಳನ್ನು ಹುಡುಕಿ ತೆಗೆಯಲಿಕ್ಕೆ ಹಚ್ಚಬಹುದು; ಭೂಗೋಲ ಪಾಠದಲ್ಲಿ ಎರಡು ದೇಶಗಳ ಹವಾಮಾನವನ್ನು ತುಲನೆಮಾಡಲಿಕ್ಕೆ ಹಚ್ಚಬಹುದು; ಭೂಮಿತಿ ಪಾಠದಲ್ಲಿ ವರ್ತುಳದ ಪರಿಘ, ತ್ರಿಜ್ಯ ಇವುಗಳ ಪರಸ್ಪರ ಸಂಬಂಧವನ್ನು ಕಂಡು ಹಿಡಿಯಲಿಕ್ಕೆ ಹಚ್ಚಬಹುದು; ಹೀಗೆ ಬೇರೆ ಬೇರೆ ವಿಷಯಗಳಲ್ಲಿ ಬೇರೆ ಬೇರ ಸಮಸ್ಯೆಗಳನ್ನು ಕೊಟ್ಟು ಮಕ್ಕಳು ಅವುಗಳನ್ನು ಸ್ವಪ್ರಯತ್ನದಿಂದ ಬಿಡಿಸುವಂತೆ ಮಾಡಬಹುದು.

ಒಟ್ಟಾರೆ, ಈ ಪದ್ಧತಿಯಲ್ಲಿ ಸ್ವಪ್ರಯತ್ನ, ಸ್ವೋದ್ಯಮ ಮತ್ತು ಸ್ವಂತ ಶಿಕ್ಷಣ ಇವುಗಳಿಗೆ ಸಂಪೂರ್ಣ ಅವಕಾಶವು ದೊರೆಯುತ್ತದೆ. ಮಕ್ಕಳು ಪ್ರಯೋಗಗಳನ್ನು ಮಾಡುವಾಗ ಮೂಲ ಶೋಧಕನ ವಿಚಾರ ಸರಣಿಯಲ್ಲಿ ಸಹಾನುಭೂತಿಯುಳ್ಳವರಾಗಬೇಕಾಗುತ್ತದೆ; ಮತ್ತು ತಾವೂ ಹೊಸ ಶೋಧಕರಂತೆ ವಿಚಾರ ಮಾಡಲಾರಂಭಿಸಬೇಕಾಗುತ್ತದೆ.

ಹೀಗೆ ಮಾಡುವದರಿಂದ ಅವರಲ್ಲಿ ಬೌದ್ಧಿಕ ಚಟಗಳು ನೆಲೆಗೊಳ್ಳುವವು. ಮತ್ತು ಮಾನಸಿಕ ಚಟುವಟಿಕೆಯು ದೊರೆಯುವದರಿಂದ ಮಕ್ಕಳಿಗೆ ಕಲಿಯಬೇಕಾದ ವಿಷಯವು ಸ್ಪಷ್ಟವಾಗಿ ತಿಳಿಯುತ್ತದೆ. ಎಲ್ಲಕ್ಕೂ ಮಹತ್ತ್ವವಾದ ಸಂಗತಿಯೆಂದರೆ, ಶೋಧನೆಯಿಂದುಂಟಾಗುವ ಸ್ವಸಂತೋಷ. ಪ್ರಾಯೋಗಿಕ ಶಾಸ್ತ್ರವು ಈ ಪದ್ಧತಿಯ ಯೋಗ್ಯ ಕ್ಷೇತ್ರ. ಆದರೂ ಈ ಪದ್ಧತಿಯ ತತ್ತ್ವವನ್ನು ಇನ್ನಿತರ ವಿಷಯಗಳಿಗೂ ಹೇಗೆ ಅನ್ವಯಿಸಬಹುದೆಂಬುದನ್ನು ಮೇಲೆ ಹೇಳಿದೆ. ಈ ಪದ್ಧತಿಯು ದೊಡ್ಡ ಮಕ್ಕಳಿಗೆ ಮಾತ್ರ ವಿಹಿತವಾದದ್ದು. ಏಕೆಂದರೆ, ಚಿಕ್ಕ ಮಕ್ಕಳನ್ನು ಮೂಲ ಶೋಧಕರ ಸ್ಥಾನದಲ್ಲಿ ಇರಿಸುವದು ಸುಲಭ ಸಾಧ್ಯವಲ್ಲ. ಈ ಪದ್ಧತಿಯು ಮಕ್ಕಳು ಕಲಿಯುವ ವಿಧಾನದ ಅಡಿಗಲ್ಲು; ಡಾಲ್ಟನ್ ಕ್ರಮದ ಅಸ್ತಿವಾರ; ಯೋಜನಾಪದ್ಧತಿಯ ನೆಲೆಗಟ್ಟು.

## ೫ ಅಭ್ಯಾಸ ಯೋಜನೆ

**ವರ್ಷದ ಅಭ್ಯಾಸ ಯೋಜನೆ :—** ಶಾಲೆಯಲ್ಲಿ ಬೇರೆಬೇರೆ ತರಗತಿಗಳಿವೆ. ಕಲಿಸಬೇಕಾದ ವಿಷಯಗಳ ಪತ್ರಿಕೆಯನ್ನೂ ಒಂದೊಂದು ವಿಷಯದ ವಿವರಗಳನ್ನೊಳಗೊಂಡ ಅಭ್ಯಾಸಪತ್ರಿಕೆ (syllabus)ಯನ್ನೂ ಶಿಕ್ಷಣಾಧಿಕಾರಿಗಳು ಸಿದ್ಧಗೊಳಿಸುತ್ತಾರೆ. ಇವುಗಳನ್ನನುಲಕ್ಷಿಸಿ ಮಕ್ಕಳ ವಿದ್ಯಾಭ್ಯಾಸವನ್ನು ಮಾಡಿಸುವದು ಶಿಕ್ಷಕನ ಕರ್ತವ್ಯ. ಅವನು ತನ್ನ ಕೆಲಸವನ್ನು ಪ್ರಾರಂಭಿಸುವದಕ್ಕಿಂತ ಮೊದಲು ತಾನು ಕಲಿಸಬೇಕಾದ ತರಗತಿ, ವಿಷಯ ಇವುಗಳಿಗೆ ಸಂಬಂಧಿಸಿದ ಅಭ್ಯಾಸ ಪತ್ರಿಕೆಯನ್ನು ಚನ್ನಾಗಿ ಅಭ್ಯಾಸಿಸಬೇಕು. ಆ ಮೇಲೆ ತನ್ನ ಇಡಿ ವರ್ಷದ ಕೆಲಸವನ್ನು ಒಂದೊಂದು ತಿಂಗಳಿಗೂ ಒಂದೊಂದು ವಾರಕ್ಕೂ ಹಂಚಿ ತನ್ನ ನಿತ್ಯ ಪಾಠಗಳ ಕ್ರಮವನ್ನು ಏರ್ಪಡಿಸಿಕೊಳ್ಳಬೇಕು. ಹೀಗೆ ವರ್ಷದ ಆರಂಭದಲ್ಲಿ ಯೋಜನೆಮಾಡದೆ ಹೋದರೆ ತನ್ನ ವರ್ಷದ ಕಾರ್ಯವು ಸಾಂಗವಾಗಿ ನೆರವೇರದು. ಒಮ್ಮೊಮ್ಮೆ ಅಭ್ಯಾಸ ಪತ್ರಿಕೆಯ ಮೇರೆಗೆ ಎಲ್ಲ ವಿಷಯಗಳು ಮುಗಿಯಲಿಕ್ಕಿಲ್ಲ. ಅಂಥ ಪ್ರಸಂಗದಲ್ಲಿ ಶಿಕ್ಷಕನು ಕಲಿಸದೆ ಉಳಿದ ಭಾಗಗಳನ್ನೆಲ್ಲ ಸಂಕ್ಷೇಪವಾಗಿಯೂ ಅವಸರದಿಂದಲೂ ಮುಗಿಸಬೇಕಾಗುತ್ತದೆ. ಆದ್ದರಿಂದ ಈ ಭಾಗಗಳ ಜ್ಞಾನವು ಮಕ್ಕಳಿಗೆ ಸಾಕಷ್ಟು ನಿಸ್ಪಷ್ಟವಾಗಲಿಕ್ಕಿಲ್ಲ. ಅಲ್ಲದೆ, ಕಲಿತ ವಿಷಯವನ್ನು ದೃಢೀಕರಿಸಿಕೊಳ್ಳಲಿಕ್ಕೆ ಅವರಿಗೆ ಸಾಕಷ್ಟು ಅವಧಿಯೂ ದೊರೆಯುವದಿಲ್ಲ. ಒಮ್ಮೊಮ್ಮೆ ಇಡಿ ವರ್ಷದ ವಿಷಯವು ಹಲವು ತಿಂಗಳ ಮುಂಚಿತವಾಗಿಯೇ ಮುಗಿದು ವರ್ಷದ ಕೊನೆಯವರೆಗೂ ಏನು ಮಾಡಬೇಕೆಂಬುದು ತಿಳಿಯದೆ ಶಿಕ್ಷಕನು ವ್ಯರ್ಥವಾಗಿ ಕಾಲಹರಣಮಾಡುವದುಂಟು.

**ದೈನಿಕ ಪಾಠಯೋಜನೆ :—** ನಿತ್ಯದ ಪಾಠಗಳ ಯೋಜನೆಯು ಇಡಿ ವರ್ಷದ ಅಭ್ಯಾಸಯೋಜನೆಯಷ್ಟೇ ಮಹತ್ತ್ವದ್ದಾಗಿದೆ. ಶಿಕ್ಷಕನ ನಿತ್ಯದ ಪಾಠಗಳು ಪರಿಣಾಮಕಾರಿಯಾಗಿ ಶಿಕ್ಷಣದ ಉದ್ದೇಶಗಳು ಈಡೇರಬೇಕಾದರೆ ಅವನು ಅವುಗಳ ಬಗ್ಗೆ ಶಾಂತಚಿತ್ತದಿಂದ ಆಲೋಚಿಸಿ ಅವಶ್ಯಕಂಡ ಎಲ್ಲ ಸಂಗತಿಗಳನ್ನು ಮೊದಲೇ ಅಳವಡಿಸಬೇಕಾಗುತ್ತದೆ. ಪ್ರತಿನಿತ್ಯದ ಪಾಠಗಳ ಯೋಜನೆಯಲ್ಲಿ ಕೆಳಗೆ ಕಂಡ ಪ್ರಯೋಜನಗಳಿವೆ.

೧ ಶಿಕ್ಷಣದ ಸಾಮಾನ್ಯ ಉದ್ದೇಶಗಳಿಗೆ ಹೊಂದಿಕೆಯಾಗುವಂತೆ ಪಾಠದ ವಿಶಿಷ್ಟ ಉದ್ದೇಶವನ್ನು ನಿರ್ಣಯಿಸುವದು ಸಾಧ್ಯವಾಗುತ್ತದೆ.

೨ ಮೊದಲು ಕಲಿಸಿದ ಪಾಠಗಳಿಗೆ ಹೊಸಪಾಠವನ್ನು ಕ್ರಮಬದ್ಧವಾಗುವಂತೆ ಜೋಡಿಸುವದು ಸುಲಭವಾಗುತ್ತದೆ.

೩ ಪಾಠದ ಅಂಗೋಪಾಂಗ, ಅವುಗಳ ಪರಸ್ಪರ ಸಂಬಂಧ, ಪಾಠದಲ್ಲಿ ಉಪಯೋಗಿಸಬೇಕಾದ ಉಪಕರಣ ಹಾಗು ಪಾಠಕ್ಕೆ ಸಂಬಂಧಿಸಿದ ಮಕ್ಕಳ ಚಟುವಟಿಕೆ ಇವೆಲ್ಲವುಗಳ ನಿರ್ದಿಷ್ಟ ಕಲ್ಪನೆಯಾಗುತ್ತದೆ.

೪ ಪಾಠವು ಪರಿಣಾಮಕಾರಿಯಾಗಲು ಯಾವ ಕ್ರಮವನ್ನು ಅನುಸರಿಸಬೇಕಾಗುವದೆಂಬುದು ತಿಳಿಯುತ್ತದೆ.

೫ ಪಾಠದ ಬೆಳವಣಿಗೆಗೆ ಮತ್ತು ಮಕ್ಕಳ ಮಾನಸಿಕ ಚಟುವಟಿಕೆಗೆ ಅಗತ್ಯವಿರುವ ಪ್ರಶ್ನೆಗಳನ್ನೂ ಅವುಗಳ ಸ್ವರೂಪವನ್ನೂ ತಯಾರಿಸಲು ಸಹಾಯವಾಗುತ್ತದೆ.

೬ ಪಾಠಾಂತ್ಯದಲ್ಲಿ ಮಕ್ಕಳಿಗೆ ಕೊಡಬೇಕಾದ ಗೃಹಪಾಠದ ವಿವರಗಳನ್ನು ಗೊತ್ತುಹಚ್ಚಲು ಬರುತ್ತದೆ.

೭ ಮಕ್ಕಳ ಬುದ್ಧಿಮಾನಕ್ಕೆ ಸುಗಮವೂ ಸುಸಂಗತವೂ ಆಗುವಂತೆ ಪಾಠವನ್ನು ಕಲಿಸಲು ಅನುಕೂಲವಾಗುತ್ತದೆ.

೮ ಪಾಠವನ್ನು ಸಾಗಿಸುವಾಗ ಶಿಕ್ಷಕನಲ್ಲಿ ಆತ್ಮವಿಶ್ವಾಸವೂ ಧೈರ್ಯವೂ ಉತ್ಸಾಹವೂ ಉಂಟಾಗುತ್ತವೆ.

## ೬ ಪಾಠದ ಮೆಟ್ಟುಗಳು

ಮಕ್ಕಳು ಸಹಜವಾಗಿ ಕಲಿಯುವ ಕ್ರಮಕ್ಕನುಸರಿಸಿಯೇ ಪಾಠದ ಸಿದ್ಧತೆಯನ್ನು ಮಾಡಬೇಕಾಗುತ್ತದೆ. ಮಕ್ಕಳು ಹೇಗೆ ಕಲಿಯುತ್ತಾರೆ-ಅವರಲ್ಲಿ ಜ್ಞಾನವು ಹೇಗೆ ಹುಟ್ಟಿ ಬೆಳೆಯುತ್ತದೆ-ಎಂಬುದನ್ನು ಅನು ಲಕ್ಷಿಸಿ **ಹರ್ಬಾರ್ಟ**ನೆಂಬ ಶಿಕ್ಷಣತಜ್ಞನು ಪಾಠಹೇಳುವ ಕ್ರಮದಲ್ಲಿ ಐದು ಮೆಟ್ಟುಗಳನ್ನು ಕಲ್ಪಿಸಿದ್ದಾನೆ. ಅವು ಯಾವವೆಂದರೆ:—

೧ (ಅ) **ಪೂರ್ವಸಿದ್ಧತೆ** ಅಥವಾ **ಪ್ರಸ್ತಾವನೆ,**

(ಬ) **ಉದ್ದೇಶಕಥನ,**

೨ **ವಿವರಣೆ,**

೩ **ತುಲನೆ** ಮತ್ತು **ಸಂಯೋಜನೆ,**

೪ **ತತ್ತ್ವಶೋಧನೆ,**

೫ **ಅಭ್ಯಾಸ.**

೧ (ಅ) **ಪೂರ್ವಸಿದ್ಧತೆ ಅಥವಾ ಪ್ರಸ್ತಾವನೆ** :— ಯಾವ ದೊಂದು ಹೊಸ ಪಾಠವನ್ನು ಕಲಿಸುವಾಗ ಅದನ್ನು ಕಲಿಯಲಿಕ್ಕೆ ಮಕ್ಕಳ ಮನಸ್ಸನ್ನು ಸಿದ್ಧಗೊಳಿಸಬೇಕಾಗುವದು. ಹೀಗೆ ಮಾಡದೆ ಹೊಸ ವಿಷಯವನ್ನು ಒಮ್ಮೆಲೆ ಪ್ರಾರಂಭಿಸಿದರೆ ಮಕ್ಕಳಿಗೆ ಅದರ ಜ್ಞಾನವು ಚನ್ನಾಗಿ ಆಗುವದಿಲ್ಲ. ಪಾಠದ ವಿಷಯದಲ್ಲಿ ಮಕ್ಕಳ ಆಸಕ್ತಿ ಹುಟ್ಟಿ ಅದನ್ನು ಅವರು ಸುಲಭವಾಗಿ ಗ್ರಹಿಸಬೇಕಾದರೆ ಪ್ರಸ್ತುತ ವಿಷಯು ವನ್ನು ಅವರ ಪೂರ್ವಜ್ಞಾನಕ್ಕೆ ಸಂಬಂಧಿಸಬೇಕಾಗುವದು. ಪೂರ್ವ ಜ್ಞಾನವೆಂದರೆ ಮಕ್ಕಳು ಹಿಂದಿನ ಪಾಠಗಳಲ್ಲಿ ಕಲಿತ ಜ್ಞಾನವಷ್ಟೇ ಅಲ್ಲ; ಅವರು ವ್ಯವಹಾರದಲ್ಲಿ ಕಲಿತ ಎಷ್ಟೋ ಸಂಗತಿಗಳೂ ಅದರಲ್ಲಿ ಸಮಾ

ವೇಶವಾಗುತ್ತವೆ. ಪ್ರಸ್ತಾವನೆಯಲ್ಲಿ ಶಿಕ್ಷಕನು ತಾನು ಕಲಿಸಬೇಕಾದ ಪಾಠಕ್ಕೆ ಸಹಾಯವಾದ ಸಂಗತಿಗಳನ್ನಷ್ಟೇ ಪ್ರಶ್ನೆಗಳ ಮೂಲಕ ಹೊರಡಿಸಿಕೊಳ್ಳಬೇಕು. ಹಿಂದಿನ ಪಾಠದ ಆವರ್ತನವು ಪ್ರಸ್ತಾವನೆಯಾಗಲಾರದು. ಒಂದು ವೇಳೆ ಹಿಂದಿನ ವಿಷಯವನ್ನು ಮುಂದುವರಿಸುವ ಪಾಠವಿದ್ದರೆ ಅದಕ್ಕೆ ಸುಸಂಗತವಾದ ಸಂಗತಿಗಳನ್ನು ಮಾತ್ರ ಕೇಳಿಕೊಳ್ಳಬೇಕು. ಪ್ರಸ್ತಾವನೆಯು ಸಂಕ್ಷೇಪವೂ ಸಮಂಜಸವೂ ಆಗಿರಬೇಕು; ಸಾಧ್ಯವಿದ್ದಷ್ಟು ಪ್ರಶ್ನೋತ್ತರ ರೂಪದಲ್ಲಿರಬೇಕು; ಮತ್ತು ಮಕ್ಕಳ ಜಿಜ್ಞಾಸೆಯನ್ನು ಜಾಗ್ರತಗೊಳಿಸುವಂತಹದಿರಬೇಕು.

ಪಾಠವನ್ನು ಅನೇಕ ರೀತಿಯಲ್ಲಿ ಪ್ರಸ್ತಾಪಿಸಬಹುದು: ಭಾಷಾ ಪಾಠದಲ್ಲಿ ಶಿಕ್ಷಕನು ಹಿಂದಿನ ಪಾಠದ ಮುಖ್ಯ ಸಂಗತಿ ಹೊರಡಿಸಿಕೊಳ್ಳಬಹುದು; ಪ್ರಸ್ತುತ ವಿಷಯದ ಸಂದರ್ಭವನ್ನು ಹೇಳಬಹುದು; ಲೇಖಕನ ಪರಿಚಯವನ್ನು ಮಾಡಿಕೊಡಬಹುದು; ಕವಿಯು ಯಾವ ಸಂದರ್ಭದಲ್ಲಿ ತನ್ನ ಕವಿತೆಯನ್ನು ಬರೆದನೆಂಬುದನ್ನು ಹೇಳಬಹುದು; ಅಥವಾ ಪಾಠ ವಿಷಯಕ್ಕೆ ಸಂಬಂಧಿಸಿದ ಬೇರೊಂದು ಸಂಗತಿಯನ್ನು ಮಕ್ಕಳು ಓದಿದ್ದರೆ ಅದನ್ನು ನೆನಪಿಗೆ ತಂದುಕೊಡಬಹುದು. ಇತಿಹಾಸ ಪಾಠದಲ್ಲಿ ಹಿಂದಿನ ಪಾಠದ ಮುಖ್ಯ ಸಂಗತಿಗಳನ್ನು ಕೇಳಿಕೊಂಡು ಮುಂದೆ ಸಾಗಬಹುದು; ಅಥವಾ ಪಾಠಕ್ಕೆ ಸಂಬಂಧಿಸಿದ ಚಿತ್ರಗಳನ್ನು ತೋರಿಸಿ ಪ್ರಶ್ನೆ ಕೇಳಬಹುದು. ಭೂಗೋಲ ಹಾಗು ವಿಜ್ಞಾನಶಾಸ್ತ್ರದ ಪಾಠಗಳಲ್ಲಿ ಯಾವದಾದರೊಂದು ಸೂಕ್ತ ಸಮಸ್ಯೆಯನ್ನು ಪ್ರಶ್ನೆಗಳ ಮೂಲಕ ಮುಂದಿಡಬಹುದು. ಗಣಿತದ ರೂಢಿ ಪಾಠದಲ್ಲಿ ಮಕ್ಕಳು ಕಲಿತ ನಿಯಮಗಳನ್ನು ಕೇಳಿಕೊಳ್ಳಬಹುದು; ಹೊಸ ಪಾಠವಿದ್ದಲ್ಲಿ ವ್ಯವಹಾರಿಕ ಸಂಗತಿಗಳನ್ನು ಕುರಿತು ಮಕ್ಕಳನ್ನು ಪ್ರಶ್ನಿಸಬಹುದು.

(ಆ) **ಉದ್ದೇಶಕಥನ**:— ಪ್ರಸ್ತಾವನೆಯ ಕೊನೆಗೆ ಪಾಠದ ಉದ್ದೇಶವನ್ನು ಹೇಳಬೇಕು. ತಾನು ಏನು ಕಲಿಯಲಿರುವೆನೆಂಬುದರ ಬಗ್ಗೆ ಕಲ್ಪನೆಯು ಮಗುವಿಗೆ ಸ್ಪಷ್ಟವಾಗಿರದಿದ್ದರೆ ಪಾಠದ ವಿಷಯದಲ್ಲಿ ಅವನಿಗೆ ಒಮ್ಮೊಮ್ಮೆ ತಪ್ಪು ಕಲ್ಪನೆಯಾಗಬಹುದು; ಅಥವಾ ಅವನ

ಮನಸ್ಸು ಅದನ್ನು ಬಿಟ್ಟು ಅತ್ತಿತ್ತ ಹರಿದಾಡಬಹುದು. ಉದ್ದೇಶವು ಸುಲಭವೂ ಸ್ಪಷ್ಟವೂ ಆಗಿರಬೇಕು. ಹಾಗು, ಅದು ಮಕ್ಕಳನ್ನು ವಿಚಾರಕ್ಕೆ ಹಚ್ಚಿ ಅವರ ಲವಲವಿಕೆಯನ್ನೂ ಕುತೂಹಲವನ್ನೂ ಹೆಚ್ಚಿಸಬೇಕು.

೨ **ವಿವರಣೆ :—** ಈ ಮೆಟ್ಟು ಅತಿ ಮಹತ್ತ್ವವಾದದ್ದು; ಯಾಕಂದರೆ ಹೊಸ ಪಾಠದ ಸಂಪೂರ್ಣ ವಿವರಣೆಯು ಇಲ್ಲಿಯೇ ಬರುತ್ತದೆ. ಈ ಮೆಟ್ಟಿನಲ್ಲಿ ಶಿಕ್ಷಕನು ಕಲಿಸಬೇಕಾದ ವಿಷಯುವನ್ನು ಸುಸಂಬದ್ಧವಾದ ಕ್ರಮದಲ್ಲಿ ವಿವರಿಸುತ್ತ ಹೋಗಬೇಕು. ಅವನು ವಿಷಯದ ಭಾಗೋಪಭಾಗಗಳನ್ನು ಮೊದಲೇ ನಿಶ್ಚಯಿಸಿ ಅವುಗಳನ್ನು ಒಂದೊಂದಾಗಿ ವಿವೇಚಿಸಬೇಕು. ಈ ಸಂದರ್ಭದಲ್ಲಿ ಅವನು ತಾನೇ ಹೆಚ್ಚು ಮಾತಾಡುತ್ತ ಮಕ್ಕಳ ಮನಸ್ಸಿನಲ್ಲಿ ಹೊಸ ವಿಷಯುವನ್ನು ತುಂಬಲಿಕ್ಕೆ ಪ್ರಯತ್ನಿಸಬಾರದು. ಅವನು ಮಕ್ಕಳೊಂದಿಗೆ ಸಹಕರಿಸಿ ಅವರಿಗೆ ಅವಶ್ಯಕಂಡಲ್ಲಿ ಸಹಾಯುಮಾಡುತ್ತ ಹೊಸ ವಿಷಯುವನ್ನು ಅವರೇ ಕಂಡುಕೊಳ್ಳುವಂತೆ ಮಾಡಬೇಕು. ಇಲ್ಲಿ ಪ್ರಶ್ನೋತ್ತರ ಪದ್ಧತಿಯು ಅತ್ಯಂತ ಸಹಕಾರಿಯಾಗುವದು. ಶಿಕ್ಷಕನು ವಿಚಾರ ಪ್ರಚೋದಕ ಪ್ರಶ್ನೆಗಳನ್ನು ಕೇಳುತ್ತ ಮಕ್ಕಳಿಂದಲೇ ಅನುಮಾನ ನಿರ್ಣಯುಗಳನ್ನು ಹೊರಡಿಸಿ ಪಾಠದ ವಿಷಯುವನ್ನು ವಿಕಾಸಗೊಳಿಸುತ್ತ ಹೋಗಬೇಕು. ಈ ಮೆಟ್ಟಿನಲ್ಲಿ ಸಾಧ್ಯವಿದ್ದಷ್ಟು ಮಕ್ಕಳಿಗೆ ಚಟುವಟಿಕೆಯನ್ನು ಕೊಡಬೇಕು. ಮತ್ತು ಆದಷ್ಟು ಹೆಚ್ಚು ಇಂದ್ರಿಯುಗಳನ್ನು ಉಪಯೋಗಿಸಲಿಕ್ಕೆ ಅವರಿಗೆ ಅವಕಾಶವನ್ನು ಕಲ್ಪಿಸಿಕೊಡಬೇಕು. ಅಗತ್ಯವಿದ್ದಲ್ಲೆಲ್ಲ ದೃಷ್ಟಾಂತ–ನಿದರ್ಶನಗಳನ್ನು ಹೇರಳವಾಗಿ ಉಪಯೋಗಿಸಬೇಕು.

ಬೇರೆ ಬೇರೆ ಪಾಠಗಳಲ್ಲಿ ಬೇರ ಬೇರೆ ವಿವರಣೆಯ ಕ್ರಮುವನ್ನು ಅನುಸರಿಸಬೇಕಾಗುತ್ತದೆ. ಗದ್ಯಪಾಠವನ್ನು ಶಿಕ್ಷಕನ ವಾಚನ ಇಲ್ಲವೆ ಮಕ್ಕಳ ಮೌನವಾಚನದಿಂದ ಪ್ರಾರಂಭಿಸಿ ಬಳಿಕ ಪಾಠದ ವಿವರಗಳನ್ನು ವಿವೇಚಿಸುತ್ತ ಹೋಗಬೇಕು. ಪದ್ಯವನ್ನು ಕಲಿಸುವಾಗ ಮೊದಲು ಶಿಕ್ಷಕನು ಹಾವಭಾವದಿಂದ ಭಾವಬೋಧಕವಾಗುವಂತೆ ಅದನ್ನು ಒಂದೆರಡು ಸಾರೆ ಅನ್ನಬೇಕಾಗುವದು; ಆಮೇಲೆ ಇಡಿ ಕವಿತೆಯನ್ನು ಸ್ಥೂಲವಾಗಿ

ವಿವೇಚಿಸಿ ಬಳಿಕ ಅದರ ಭಾಗೋಪಭಾಗಗಳನ್ನು ವಿವೇಚಿಸಬೇಕು. ಇತಿಹಾಸ ಭೂಗೋಲಗಳ ಪಾಠ ವಿಷಯಗಳನ್ನು ಕಥಾರೂಪದಲ್ಲಿ ಹೆಣೆಯಬಹುದು; ಇಲ್ಲವೆ ಚಿತ್ರ, ನಕಾಶ, ಮಾದರಿ ಮುಂತಾದವುಗಳ ಸಹಾಯದಿಂದ ಅದನ್ನು ವಿವೇಚಿಸುತ್ತ ಹೋಗಬಹುದು. ಗಣಿತ ಪಾಠ ವನ್ನು ಕಲಿಸುವಾಗ ಸೂಕ್ತವಾದ ವ್ಯವಹಾರಿಕ ಸಮಸ್ಯೆಗಳನ್ನು ಮಕ್ಕಳ ಮುಂದಿರಿಸಿ ಬಳಿಕ ಅವುಗಳನ್ನು ಬಿಡಿಸಲಿಕ್ಕೆ ಆಗತ್ಯವಾದ ಗಣಿತ ಜ್ಞಾನ ವನ್ನು ಹೇಳಿಕೊಡಬಹುದು; ಅಥವಾ ಉದಾಹರಣೆ ಆಕೃತಿಗಳನ್ನು ಪರಿಶೀಲಿಸಬಹುದು.

೩ **ತುಲನೆ** ಮತ್ತು **ಸಂಯೋಜನೆ**:— ಮೇಲಿನ ಮೆಟ್ಟಿನಲ್ಲಿ ಮಕ್ಕಳಿಗೆ ಕಲಿಸಿದ ಸಂಗತಿಗಳನ್ನು ಹಾಗೇ ಬಿಟ್ಟಲ್ಲಿ ಜ್ಞಾನವು ಪೂರ್ಣ ವಾಗುವದಿಲ್ಲ. ಏಕೆಂದರೆ, ಹೊಸ ಸಂಗತಿಗಳಿಗೂ ಮೊದಲು ಗೊತ್ತಿದ್ದ ಸಂಗತಿಗಳಿಗೂ ಇರುವ ಸಾಮ್ಯ-ವೈಷಮ್ಯಗಳನ್ನು ಕಂಡುಕೊಳ್ಳುವದು ಮನಸ್ಸಿನ ಸ್ವಾಭಾವಿಕವಾದ ಧರ್ಮವಾಗಿದೆ. ಆದುದರಿಂದ ಹಿಂದೆ ಗೊತ್ತಿದ್ದ ಸಂಗತಿಗಳಿಗೂ ಹೊಸ ಸಂಗತಿಗಳಿಗೂ ಸಾಧ್ಯವಿದ್ದಲ್ಲಿ ತುಲನೆ ಮಾಡಹಚ್ಚಿ ಹೊಸ ಜ್ಞಾನವನ್ನು ಮಕ್ಕಳ ಪೂರ್ವಜ್ಞಾನಕ್ಕೆ ಜೋಡಿಸ ಬೇಕು. ಇದರಿಂದ ಹೊಸ ಸಂಗತಿಗಳು ಮಕ್ಕಳಿಗೆ ಸ್ಪಷ್ಟವಾಗುವವಲ್ಲದೆ ಅವು ಅವರ ಮನಸ್ಸಿನಲ್ಲಿ ಸ್ಥಿರವಾಗಿ ಉಳಿಯುವವು. ಇದಕ್ಕೆ ಪಾಠದ ಒಂದು ವಿಶಿಷ್ಟ ಮೆಟ್ಟು ಎಂದು ಹೇಳುವದಕ್ಕಿಂತ ಹೊಸ ಜ್ಞಾನವನ್ನು ಅರಗಿಸುವ ಕ್ರಮದ ಒಂದು ಮುಖ್ಯಾಂಶವೆಂದು ಹೇಳುವದು ಹೆಚ್ಚು ಉಚಿತವು.

೪ **ತತ್ತ್ವಶೋಧನೆ**:— ಇಲ್ಲಿಯವರೆಗೆ ವಿವೇಚಿಸಿದ ವಿವಿಧ ಸಂಗತಿಗಳನ್ನೆಲ್ಲ ಸಂಗ್ರಹಿಸಿ ಅವುಗಳಿಗೆಲ್ಲ ಅನ್ವಯಿಸುವ ಸಾಮಾನ್ಯ ತತ್ತ್ವ ಅಥವಾ ನಿಯಮವನ್ನು ಈ ಮೆಟ್ಟಿನಲ್ಲಿ ಹೊರಡಿಸಿಕೊಳ್ಳಬೇಕು. ಈ ಮೆಟ್ಟು ಗಣಿತ, ವ್ಯಾಕರಣ, ವಿಜ್ಞಾನಶಾಸ್ತ್ರ ಈ ಪಾಠಗಳಲ್ಲಿ ಹೆಚ್ಚಾಗಿ ಉಪಯೋಗವಾಗುತ್ತದೆ.

೫ **ಅಭ್ಯಾಸ:** — ಜ್ಞಾನವು ಒಂದು ವಿಧವಾದ ಬಲ. ಆದರೆ ಅದನ್ನು ವ್ಯವಹಾರದಲ್ಲಿ ಉಪಯೋಗಿಸದೆ ಬಿಟ್ಟರೆ ಅದು ದುರ್ಬಲವಾಗಿ ಪರಿಣಮಿಸುವದು. ಆದುದರಿಂದ ಮಕ್ಕಳಿಗೆ ಅಭ್ಯಸನಗಳನ್ನು ಕೊಟ್ಟು ಅವರು ಸಂಪಾದಿಸಿದ ಹೊಸ ಜ್ಞಾನವನ್ನು ಉಪಯೋಗಿಸುವಂತೆ ಮಾಡಬೇಕು. ಅಭ್ಯಸನಗಳಿಂದ ಮಕ್ಕಳಿಗೆ ಚಟುವಟಿಕೆಗಳು ದೊರೆಯುತ್ತವೆ — ಅಲ್ಲದೆ ಅವರಿಗೆ ಕಲಿಸಿದ ಸಂಗತಿಗಳು ಸರಿಯಾಗಿ ತಿಳಿದಿರುವವೋ ಇಲ್ಲವೋ ಎಂಬುದು ಗೊತ್ತಾಗುತ್ತದೆ. ವಿಷಯಕ್ಕೆ ತಕ್ಕಂತೆ ಅಭ್ಯಸನಗಳನ್ನು ಕೊಡಬೇಕಾಗುತ್ತದೆ. ಗಣಿತ, ವ್ಯಾಕರಣ, ವಿಜ್ಞಾನ ಶಾಸ್ತ್ರದ ಪಾಠಗಳಲ್ಲಿ ಉದಾಹರಣೆಗಳನ್ನು ಕೊಡಬಹುದು. ಗದ್ಯಪಾಠದಲ್ಲಿ ಕೊಟ್ಟ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತಮ್ಮ ವಾಕ್ಯದಲ್ಲಿ ತುಂಬುವದು, ಹೊಸ ಶಬ್ದಗಳನ್ನು ತಮ್ಮ ವಾಕ್ಯದಲ್ಲಿ ಉಪಯೋಗಿಸುವದು, ಅಸ್ತವ್ಯಸ್ತ ವಾಕ್ಯಗಳನ್ನು ಸರಿಪಡಿಸುವದು; ಇತಿಹಾಸಪಾಠದಲ್ಲಿ ಸಂಗತಿಗಳನ್ನೂ ಇಸವಿಗಳನ್ನೂ ಹೊಂದಿಸುವದು, ನಕಾಶದಲ್ಲಿ ರಾಜ್ಯ ವಿಸ್ತಾರವನ್ನು ತೋರಿಸುವದು, ಕೊಟ್ಟ ಸಂಗತಿಗಳನ್ನು ಸರಿ ಅಥವಾ ತಪ್ಪು ಎಂದು ಗುರುತಿಸುವದು; ಭೂಗೋಲಪಾಠದಲ್ಲಿ ನಕಾಶದಲ್ಲಿ ಸ್ವಾಭಾವಿಕ ವಿಭಾಗಗಳನ್ನೂ ಮುಖ್ಯ ಪಟ್ಟಣ-ಬಂದರಗಳನ್ನೂ ರೇಲ್ವೆ, ಉಗಿಹಡಗ, ವಿಮಾನ ಮೊದಲಾದವುಗಳ ಮಾರ್ಗಗಳನ್ನೂ ತೋರಿಸುವದು; ಮುಂತಾದ ಅನೇಕ ಕೆಲಸಗಳನ್ನು ಮಾಡಹಚ್ಚಬಹುದು.

ಈ ಮೆಟ್ಟಿನ ಕೊನೆಗೆ ಮಕ್ಕಳಿಗೆ ಗೃಹಪಾಠವನ್ನು ಕೊಟ್ಟು ಪಾಠವನ್ನು ಮುಗಿಸಬೇಕು.

ಮೇಲೆ ಹೇಳಿದ ಎಲ್ಲ ಮೆಟ್ಟುಗಳು ಎಲ್ಲ ಪಾಠಗಳಿಗೂ ಅನ್ವಯಿಸುವದಿಲ್ಲ. ಕೆಲವು ಪಾಠಗಳಲ್ಲಂತೂ ಅವುಗಳನ್ನು ಅನುಸರಿಸುವದು ನಿರರ್ಥಕ. ಉದಾಹರಣಾರ್ಥವಾಗಿ ಡ್ರಾಯಿಂಗ, ಕೈಕೆಲಸ, ಬರೆಹ, ಕವಿತೆ ಮುಂತಾದ ಪಾಠಗಳಿಗೆ ಎಲ್ಲ ಮೆಟ್ಟುಗಳ ಅವಶ್ಯಕತೆ ಇರುವದಿಲ್ಲ. ಸಾಮಾನ್ಯವಾಗಿ ಗಣಿತ, ವ್ಯಾಕರಣ, ವಿಜ್ಞಾನಶಾಸ್ತ್ರ ಈ ಪಾಠಗಳಲ್ಲಿ ವಿಗಮನ-ನಿಗಮನ ಪದ್ಧತಿಯನ್ನು ಉಪಯೋಗಿಸಬೇಕಾಗುವದರಿಂದ

ಅವುಗಳಲ್ಲಿ ಮಾತ್ರ ಈ ಎಲ್ಲ ಮೆಟ್ಟುಗಳನ್ನು ಉಪಯೋಗಿಸುವದು ಸಾಧ್ಯವಿದೆ. ಎಲ್ಲ ಪಾಠಗಳಲ್ಲಿ ಸಾಧಾರಣವಾಗಿ ಕೆಳಗೆ ವಿವರಿಸಿದ ಮೂರು ನಿರ್ದಿಷ್ಟ ಮೆಟ್ಟುಗಳನ್ನು ಕಲ್ಪಿಸಿಕೊಳ್ಳಬಹುದು :

೧ (ಅ) **ಪೂರ್ವಸಿದ್ಧತೆ** ಅಥವಾ **ಪ್ರಸ್ತಾವನೆ,**
(ಬ) **ಉದ್ದೇಶಕಥನ,**

೨ **ವಿವೇಚನೆ,**

೩ **ಸಿಂಹಾವಲೋಕನ** ಅಥವಾ **ಉಪಸಂಹಾರ.**

# ೭ ಗೃಹಪಾಠ

ಕಲಿಸಿದ ವಿಷಯಗಳನ್ನು ದೃಢೀಕರಿಸಲಿಕ್ಕೆ ಅವುಗಳ ಪುನರಾವರ್ತನ ಮಾಡಬೇಕಾಗುತ್ತದೆ. ಈ ಕೆಲಸವನ್ನು ಕೆಲಮಟ್ಟಿಗೆ ಶಾಲೆಯಲ್ಲಿ ಮಾಡಬಹುದು. ಆದರೆ ಅದನ್ನು ಸಂಪೂರ್ಣವಾಗಿ ಮಾಡಲಿಕ್ಕೆ ಅಲ್ಲಿ ಸಾಕಷ್ಟು ಅವಧಿಯು ದೊರೆಯುವದಿಲ್ಲ. ಆದುದರಿಂದ ಮಕ್ಕಳಿಗೆ ಗೃಹಪಾಠವನ್ನು ಕೊಡಬೇಕಾಗುತ್ತದೆ. ಇದಲ್ಲದೆ, ಮಕ್ಕಳು ಸ್ವತಂತ್ರವಾಗಿ ಕಲಿಯುವಂತೆ ಪ್ರೇರಿಸುವದೇ ಶಿಕ್ಷಕನು ಮಾಡಬೇಕಾದ ಮುಖ್ಯ ಕೆಲಸ. ಸ್ವತಂತ್ರವಾಗಿ ಕಲಿಯುವದನ್ನು ಶಾಲಾಪಾಠಗಳ ಮೂಲಕ ಮಾತ್ರವಲ್ಲದೆ ಗೃಹಪಾಠಗಳ ಮೂಲಕವೂ ಪ್ರೋತ್ಸಾಹಿಸಬಹುದು. ಗೃಹಪಾಠಗಳಿಂದ ಮಕ್ಕಳಲ್ಲಿ ಕೆಲಸ ಮಾಡುವ ಚಟ, ಸ್ವಾವಲಂಬನ, ನಿಯಮಿತತನ, ಅಚ್ಚುಕಟ್ಟುತನ ಇವು ನೆಲೆಗೊಳ್ಳುತ್ತವೆ. ಗೃಹಪಾಠಗಳಿಂದ ಇನ್ನೂ ಅನೇಕ ಪ್ರಯೋಜನಗಳುಂಟು. ಕಲಿಯುವದು ಶಾಲೆಯಲ್ಲಿ ಆಡುವದು ಮನೆಯಲ್ಲಿ — ಶಾಲೆಯ ಕೆಲಸಕ್ಕೂ ಮನೆಗೂ ಯಾವ ಸಂಬಂಧವೂ ಇಲ್ಲ — ಎಂಬ ತಪ್ಪು ತಿಳಿವಳಿಕೆಯು ಜನರಲ್ಲಿ ಹೇಗೋ ರೂಢವಾಗಿದೆ. ಗೃಹಪಾಠಗಳಿಂದ ಈ ತಪ್ಪು ತಿಳಿವಳಿಕೆಯು ದೂರಾಗಿ ಶಿಕ್ಷಣವು ಶಾಲೆಯಲ್ಲಿಯೂ ಮನೆಯಲ್ಲಿಯೂ ಕೂಡಿಯೇ ಸಾಗಬೇಕಾದ ಕಾರ್ಯವೆಂದು ಮಕ್ಕಳಿಗೆ ಗೊತ್ತಾಗುವದು. ಇನ್ನು ಮಕ್ಕಳಿಗೆ ಗೃಹಪಾಠಗಳನ್ನು ಕೊಡುವದರಿಂದ ಅವರ ತಂದೆ ತಾಯಿಗಳ ಅಥವಾ ಪಾಲಕರ ಲಕ್ಷವನ್ನು ಶಾಲೆಯ ಕಡೆಗೆ ಎಳೆಯಬಹುದು. ಮಕ್ಕಳು ಮನೆಯಲ್ಲಿ ಓದುವದು, ಬರೆಯುವದು ಮುಂತಾದ ಯಾವದೊಂದು ಶಾಲೆಯ ಕೆಲಸವನ್ನು ಮಾಡುತ್ತಿದ್ದರೆ ಅದನ್ನು ನೋಡಿ ತಂದೆ ತಾಯಿಗಳು ಸಹಜವಾಗಿ ಶಾಲೆಯ ಕೆಲಸಗಳಲ್ಲಿ ಮನಸ್ಸು ಹಾಕುತ್ತ

ಹೋಗುವರು. ಆದುದರಿಂದ ಶಾಲೆಯ ಬಗ್ಗೆ ಪಾಲಕರಲ್ಲಿ ಸಾಮಾನ್ಯ ವಾಗಿ ತೋರಿಬರುವ ಉದಾಸೀನತೆಯು ಕಡಿಮೆಯಾಗುವದು.

ಗೃಹಪಾಠಗಳನ್ನು ಕುರಿತು ಶಿಕ್ಷಕರು ಕೆಳಗಿನ ಸಂಗತಿಗಳನ್ನು ಲಕ್ಷದಲ್ಲಿಡುವದು ಅಗತ್ಯವಾದುದು :

೧ ಗೃಹಪಾಠವು ನಿಶ್ಯಷ್ಟವಾದದ್ದೂ ಸ್ಪಷ್ಟವಾದದ್ದೂ ಇರಬೇಕು.

೨ ಅದು ನಿತ್ಯದ ಪಾಠಗಳಿಗೆ ಸುಸಂಬದ್ಧವಾಗಿರಬೇಕು.

೩ ಅದು ವರ್ಗದ ಬಾಲಕರ ಸರಾಸರಿ ಬುದ್ಧಿಮಟ್ಟಕ್ಕೆ ತಕ್ಕು ದಾಗಿರಬೇಕು.

೪ ಅದು ವಿಚಾರ ಪ್ರಚೋದಕವಾದುದೂ ಆಸಕ್ತಿ ಹುಟ್ಟಿಸು ವಂತಹದೂ ಆಗಿರಬೇಕು.

೫ ಆದರಿಂದ ಮಕ್ಕಳಿಗೆ ಹೆಚ್ಚಾಗಿ ಮಾನಸಿಕ ಪರಿಶ್ರಮವುಂಟಾಗ ಬಾರದು.

೬ ಶೈಶವದಲ್ಲಿ ಗೃಹಪಾಠಗಳನ್ನು ಕೊಡಲೇ ಬಾರದು. ಬಾಲ್ಯ ದಲ್ಲಿ ಸುಮಾರು ಅರ್ಧ ತಾಸಿನ ಕೆಲಸವನ್ನು ಮೊದಲು ಕೊಡುತ್ತ ಮುಂದೆ ಕ್ರಮೇಣ ಒಂದೂವರೆ ತಾಸಿನ ಕೆಲಸವನ್ನು ಕೊಡಬಹುದು.

೭ ಮಕ್ಕಳು ಗೃಹಪಾಠವನ್ನು ಸ್ವತಂತ್ರವಾಗಿ ಮಾಡುವರೋ ಇಲ್ಲವೋ ಎಂಬುದನ್ನು ತಿಳಿದುಕೊಳ್ಳಲಿಕ್ಕೂ, ಕೊಟ್ಟ ಕೆಲಸವನ್ನು ಅವರು ಮಾಡದೇ ಹೋದರೆ ಅದರ ಕಾರಣವನ್ನು ಗೊತ್ತುಮಾಡಿಕೊಳ್ಳ ಲಿಕ್ಕೂ ಶಿಕ್ಷಕರು ಪಾಲಕರ ಸಹಕಾರವನ್ನು ದೊರಕಿಸಬೇಕು.

೮ ಮಕ್ಕಳು ಮನೆಯಲ್ಲಿ ಮಾಡಿದ ಕೆಲಸವನ್ನು ಶಿಕ್ಷಕರು ತಪ್ಪದೆ ನೋಡಬೇಕು.

# ೮ ಪಾಠದ ಟಿಪ್ಪಣಿಗಳು

ಶಿಕ್ಷಕನು ವರ್ಗದಲ್ಲಿ ಕಲಿಸಬೇಕಾದ ಪಾಠದ ಕ್ರಮವನ್ನು ಟಿಪ್ಪಣಿಯ ಮೂಲಕ ನಿರ್ದೇಶಿಸುತ್ತಾನೆ.

ಟಿಪ್ಪಣಿಯೆಂದರೆ ವರ್ಗದಲ್ಲಿ ಪಾಠಹೇಳಲು ಶಿಕ್ಷಕನು ಸಿದ್ಧಪಡಿಸಿಕೊಳ್ಳುವ ಬರೆಹ. ಟಿಪ್ಪಣಿಯನ್ನು **ಸಂಕ್ಷಿಪ್ತ ಟಿಪ್ಪಣಿ, ಪೂರ್ಣ ಟಿಪ್ಪಣಿ** ಎಂದು ಎರಡು ವಿಧವಾಗಿ ಬರೆಯುವದುಂಟು. ಪಾಠದ ವಿಷಯದ ಅಂಗೋಪಾಂಗಗಳನ್ನು ಕ್ರಮವಾಗಿ ವಿಭಾಗಿಸಿ ಕಲಿಸುವ ಕ್ರಮವನ್ನು ಬರೆಯುವದು ಪೂರ್ಣ ಟಿಪ್ಪಣಿ. ಟ್ರೇನಿಂಗ ಕಾಲೇಜಿನಲ್ಲಿ ಶಿಕ್ಷಣ ಹೊಂದುತ್ತಿರುವ ಶಿಕ್ಷಕರೂ ಶಿಕ್ಷಕ ವೃತ್ತಿಯನ್ನು ಹೊಸದಾಗಿ ಕೈಕೊಂಡ ಶಿಕ್ಷಕರೂ ಪೂರ್ಣಟಿಪ್ಪಣಿಗಳನ್ನು ಬರೆಯುವದು ಅತ್ಯಗತ್ಯ.

ಪೂರ್ಣಟಿಪ್ಪಣಿಯಿಂದ ಅನೇಕ ಪ್ರಯೋಜನಗಳುಂಟಾಗುವವು. ಪಾಠದ ವಿಷಯು, ಅದನ್ನು ಕಲಿಸುವ ಕ್ರಮ, ಅದಕ್ಕೆ ಬೇಕಾದ ಉಪಕರಣ ಇವೆಲ್ಲವುಗಳನ್ನು ಕುರಿತು ಶಿಕ್ಷಕನಿಗೆ ನಿಷ್ಕೃಷ್ಟವಾದ ಜ್ಞಾನ ಉಂಟಾಗುವದು. ಪಾಠದ ಸಮಯದಲ್ಲಿ ಯಾವ ತೊಂದರೆಗಳೂ ಉಂಟಾಗುವದಿಲ್ಲ; ಒಂದು ವೇಳೆ ಉಂಟಾದರೆ ಅವುಗಳನ್ನು ಸುಲಭವಾಗಿ ಪರಿಹರಿಸಿಕೊಳ್ಳಬಹುದು. ಹಿಂದಿನ, ಇಂದಿನ, ಮುಂದಿನ ಪಾಠಗಳನ್ನು ಸುಸಂಬದ್ಧವಾದ ರೀತಿಯಲ್ಲಿ, ಕಲಿಸುವ ಕ್ರಮವನ್ನು ಒಂದು ಅಖಂಡವಾದ ಪ್ರವಾಹದಂತೆ ಸಾಗಿಸಲು ಅನುಕೂಲವಾಗುತ್ತದೆ. ಇದಲ್ಲದೆ ಶಿಕ್ಷಕನಲ್ಲಿ ಆತ್ಮವಿಶ್ವಾಸವೂ ಧೈರ್ಯವೂ ಹುಟ್ಟಿ ಪಾಠವು ತಡೆಯಿಲ್ಲದೆ ಸಾಗುತ್ತದೆ. ಶಿಕ್ಷಕನು ಒಂದು ವರ್ಷ ತಯಾರಿಸಿದ ಟಿಪ್ಪಣಿಗಳನ್ನು ಮತ್ತೆ ಮತ್ತೆ ಉಪಯೋಗಿಸಕೊಳ್ಳಬಹುದು. ಆದರೆ ಅನುಭವದಿಂದ ಅವುಗಳನ್ನು ಸರಿಪಡಿಸುತ್ತ ಸಾಗುವದು ವಿಹಿತ.

ಒಂದು ಪಾಠದ ಪೂರ್ಣ ಟಿಪ್ಪಣಿಯನ್ನು ಮಾದರಿಗಾಗಿ ಇಲ್ಲಿ ಕೊಟ್ಟಿದೆ :—

ಶಿಕ್ಷಕನ ಹೆಸರು .................................. ತಾರೀಖು ..................

ವಿಷಯ:— ಅಂಕಗಣಿತ. 	ವೇಳೆ:— ೪೦ ಮಿನಿಟು

ವರ್ಗ:— ೪ನೆಯ ಇಯತ್ತೆ

ಮಕ್ಕಳ ಪೂರ್ವಜ್ಞಾನ:—ಅಪೂರ್ಣಾಂಕಗಳ ಸಾಮಾನ್ಯ ಕಲ್ಪನೆ.

ಸಾಮಾನ್ಯ ಉದ್ದೇಶ:— ವ್ಯವಹಾರಜ್ಞಾನವಾಗಬೇಕೆಂದು.

ಪಾಠದ ಉದ್ದೇಶ:— ಸಮುಚ್ಛೇದಗಳುಳ್ಳ ವ್ಯವಹಾರೀ ಅಪೂರ್ಣಾಂಕಗಳ ಬೇರೀಜು ಕಲಿಸುವದು.

ಉಪಕರಣ:— ಆಳತೆಪಟ್ಟಿ, ತ್ರಿಕೋಣಪಟ್ಟಿ, ಬಣ್ಣದ ಖಡು ಇತ್ಯಾದಿ.

---

ಟಿಪ್ಪಣಿ ಬರೆಯುವಾಗ ಟ್ರೇನಿಂಗ ಕಾಲೇಜಿನ ಶಿಕ್ಷಕ-ವಿದ್ಯಾರ್ಥಿಗಳು ಸಾಮಾನ್ಯವಾಗಿ ಮಾಡಬಹುದಾದ ಕೆಲವು ತಪ್ಪುಗಳು:—

೧ ವರ್ಗಕ್ಕೆ ತಕ್ಕಂತೆ, ನಿಶ್ಚಿತ ವೇಳೆಯಲ್ಲಿ ಮುಗಿಯುವಂತೆ, ಮತ್ತು ಪ್ರಸ್ತಾವನೆ, ವಿವೇಚನೆ, ಸಿಂಹಾವಲೋಕನ ಈ ಮೆಟ್ಟುಗಳ ಮಹತ್ತ್ವಕ್ಕನುಸರಿಸಿ ವಿಷಯದ ಭಾಗೋಪಭಾಗಗಳನ್ನು ಸರಿಪಡಿಸುವದಿಲ್ಲ.

೨ ಉಪಯೋಗಿಸುವ ಉಪಕರಣಗಳ ಹೆಸರುಗಳನ್ನು ಸಂಪೂರ್ಣವಾಗಿ ಬರೆಯುವದಿಲ್ಲ. ಚಿತ್ರ, ನಕಾಶ, ಮಾದರಿ ಎಂದು ಮಾತ್ರ ಬರೆಯುವದುಂಟು. ಆದರೆ ಯಾವ ಚಿತ್ರ, ಯಾವ ನಕಾಶ, ಯಾವ ಮಾದರಿ ಎಂಬುದನ್ನು ಸ್ಪಷ್ಟವಾಗಿ ತಿಳಿಸುವದಿಲ್ಲ. ಅಲ್ಲದೆ, ಅವು ಪಾಠದ ಯಾವ ಸಂದರ್ಭಗಳಲ್ಲಿ ಉಪಯೋಗಿಸಲ್ಪಡುವವೆಂಬುದನ್ನು ಕ್ರಮದ ವಿಭಾಗದಲ್ಲಿ ತೋರಿಸುವದಿಲ್ಲ.

೩ ಸಾಮಾನ್ಯ ಉದ್ದೇಶದಲ್ಲಿ ಕಲ್ಪನೆ, ವಿಚಾರ, ಸ್ಮರಣ ಮುಂತಾದ ಶಕ್ತಿಗಳನ್ನು ಬೆಳೆಸುವದು ಎಂದು ಬರೆಯುವ ರೂಢಿ ಇನ್ನೂ ಇದೆ. ಹೀಗೆ ಬರೆಯುವದರಿಂದ ಶಕ್ತಿ ಪೋಷಣೆ ಎಂಬ ಧ್ಯೇಯವನ್ನಿಟ್ಟುಕೊಂಡ ಮನಶ್ಶಾಸ್ತ್ರವನ್ನು ಅನುಸರಿಸುವಂತೆ ಭಾಸವಾಗುತ್ತದೆ.

೪ ವಿಷಯ, ವರ್ಗ, ವೇಳೆ ಇತ್ಯಾದಿ ವಿವರಗಳನ್ನು ಎಷ್ಟೋ ಸಾರೆ ಬರೆಯುವದಿಲ್ಲ.

೫ ವಿಷಯ ಹಾಗು ಕ್ರಮ ಈ ವಿಭಾಗಗಳಲ್ಲಿ ತೋರಿಸುವ ಸಂಗತಿಗಳನ್ನು ಒಮ್ಮೊಮ್ಮೆ ಅದಲುಬದಲು ಮಾಡುವದುಂಟು.

೬ ಸಾಧಾರಣವಾಗಿ ಗೃಹಪಾಠವನ್ನು ಮುಂದಾಲೋಚನೆಯಿಲ್ಲದೆ ಕೊಡುವದುಂಟು.

೭ ಹಲವು ಪಾಠಗಳ ಕರೀ ಹಲಿಗೆಯ ಸಾರಾಂಶವನ್ನು ಟಿಪ್ಪಣಿಯ ಕೊನೆಗೆ ಚೌಕು ಮನೆಯಲ್ಲಿ ತೋರಿಸುವದಿಲ್ಲ — ಇತ್ಯಾದಿ.

| ಮೆಟ್ಟು | ವಿಷಯ | ಕ್ರಮ |
| --- | --- | --- |
| ೧ (ಅ) ಪ್ರಸ್ತಾವನೆ | ೬+೩=೯<br>೧೨+೭=೧೯<br>$\frac{೧}{೩}+\frac{೧}{೩}=$ ? | ಶಿಕ್ಷಕನು ಕೆಳಗಿನ ಪ್ರಶ್ನೆ ಕೇಳುವದು :<br>(೧) ೬, ೩ ಇವುಗಳ ಬೇರೀಜು ಎಷ್ಟು ?<br>(೨) ೧೨, ೭ ಇವುಗಳ ಬೇರೀಜು ಎಷ್ಟು ?<br>(೩) $\frac{೧}{೩}$, $\frac{೧}{೩}$ ಇವುಗಳ ಬೇರೀಜು ಎಷ್ಟು ? |
| (ಬ) ಉದ್ದೇಶಕಥನ | ಈಗ ನಾವು ವ್ಯವಹಾರೀ ಅಪೂರ್ಣಾಂಕಗಳ ಬೇರೀಜು ಕಲಿಯೋಣ. | |
| ೨ ವಿವರಣೆ | (ಅ) $\frac{೧}{೩}+\frac{೧}{೩}=$ ?<br>$\frac{೧}{೩}$ + $\frac{೧}{೩}$ = $\frac{೨}{೩}$ | ಶಿಕ್ಷಕನು (ಅ) ಉದಾಹರಣೆಯನ್ನು ಕರೇ ಹಲಿಗೆಯ ಮೇಲೆ ಕೆಳಗೆ ಹೇಳಿದಂತೆ ಮಕ್ಕಳ ಸಹಾಯದಿಂದ ಬಿಡಿಸುವದು. ಕರೇ ಹಲಿಗೆಯ ಮೇಲೆ ವಿಷಯದ ವಿಭಾಗದಲ್ಲಿ ತೋರಿಸಿದಂತೆ ಒಂದು ಕಾಟಕೋನ ಚೌಕೋನಾಕೃತಿಯನ್ನು ತೆಗೆದು ಕೆಳಗಿನ ಪ್ರಶ್ನೆ ಕೇಳುವದು : |

(೧) ಈ ಆಕೃತಿಯಲ್ಲಿ ಎಷ್ಟು ಭಾಗ ಮಾಡಿದರೆ ಮೂರನೆಯ ಅಂಶಗಳಾಗುತ್ತವೆ ?

(೨) ( ಭಾಗಮಾಡಿ ) ಅಂದರೆ ಪ್ರತಿಯೊಂದು ಮನೆಯು ಇಡಿ ಆಕೃತಿಯ ಎಷ್ಟನೆಯ ಅಂಶವು ?

(೩) ಹಾಗಾದರೆ ಈ ಮೊದಲನೆಯ ಒಂದು ಮನೆಯು ಇಡಿ ಆಕೃತಿಯ ಎಷ್ಟು ಮೂರನೆಯ ಅಂಶವು ?

(೪) ಈ ಎರಡನೆಯ ಒಂದು ಮನೆಯು ಇಡಿ ಆಕೃತಿಯ ಎಷ್ಟು ಮೂರನೆಯ ಅಂಶವು?

(೫) ಒಂದನೆಯ ಹಾಗು ಎರಡನೆಯ ಮನೆಗಳು ಕೂಡಿ ಇಡಿ ಆಕೃತಿಯ ಎಷ್ಟು ಮೂರನೆಯ ಅಂಶವಾಗುವದು ?

( ಈ ಪ್ರಶ್ನೆ ಕೇಳುವ ಮೊದಲು ಆ ಎರಡು ಮನೆಗಳಲ್ಲಿ ಚುಕ್ಕೆಕೊಟ್ಟುತೋರಿಸಿ ಕೇಳಬೇಕು.)

| ಮೆಟ್ಟು | ವಿಷಯ | ಕ್ರಮ |
|---|---|---|
| | (ಆ) $\frac{೧}{೫}+\frac{೨}{೫}+\frac{೧}{೫}$<br>(ಇ) $\frac{೨}{೭}+\frac{೧}{೭}+\frac{೩}{೭}$ | ಶಿಕ್ಷಕನು (ಆ) ಮತ್ತು (ಇ) ಉದಾಹರಣೆಗಳನ್ನೂ ಮೇಲೆ ಹೇಳಿದ ಕ್ರಮಕ್ಕನುಸರಿಸಿ ಆಕೃತಿಗಳ ಸಹಾಯದಿಂದ ಕರೇ ಹಲಿಗೆಯ ಮೇಲೆ ಬಿಡಿಸುವದು. |
| ೩ ತುಲನೆ | (ಅ) $\frac{೧}{೩}+\frac{೧}{೩}=\frac{೨}{೩}$<br>(ಆ) $\frac{೧}{೫}+\frac{೨}{೫}+\frac{೧}{೫}=\frac{೪}{೫}$<br>(ಇ) $\frac{೨}{೭}+\frac{೧}{೭}+\frac{೩}{೭}=\frac{೬}{೭}$ | ಶಿಕ್ಷಕನು ಆಕೃತಿ ಸಹಾಯದಿಂದ ಬಿಡಿಸಿದ ಉದಾಹರಣೆಗಳನ್ನು ಉತ್ತರ ಸಹಿತ ಕರೇ ಹಲಿಗೆಯ ಮೇಲೆ ಕ್ರಮವಾಗಿ ಬರೆದು, ಬಳಿಕ ಪ್ರತಿಯೊಂದು ಉದಾಹರಣೆಯ ಪದಗಳ ಅಂಶ ಛೇದಗಳನ್ನೂ ಅದರ ಉತ್ತರದ ಅಂಶಛೇದಗಳನ್ನೂ ನಿರೀಕ್ಷಿಸಲಿಕ್ಕೂ ತುಲನೆ ಮಾಡಲಿಕ್ಕೂ ಮಕ್ಕಳಿಗೆ ಹೇಳುವದು. |

| | | |
|---|---|---|
| **೪ ತತ್ತ್ವಶೋಧನೆ** | ಯಾವ ಅಪೂರ್ಣಾಂಕಗಳ ಬೇರೀಜು ಮಾಡಬೇಕಾಗಿದೆಯೋ ಆ ಅಪೂರ್ಣಾಂಕಗಳ ಛೇದಗಳು ಸಮವಿದ್ದರೆ, ಅವುಗಳ ಅಂಶಗಳ ಬೇರೀಜನ್ನು ಅಂಶಸ್ಥಾನದಲ್ಲಿಯೂ, ಅವುಗಳ ಸಾಧಾರಣವಾದ ಛೇದವನ್ನು ಛೇದಸ್ಥಾನದಲ್ಲಿಯೂ ಬರೆಯಬೇಕು; ಹಾಗೆ ಮಾಡುವದರಿಂದ ಬರುವ ಹೊಸ ಅಪೂರ್ಣಾಂಕವೇ ಕೊಟ್ಟ ಅಪೂರ್ಣಾಂಕಗಳ ಬೇರೀಜಾಗುವದು. | ಈ ಉದಾಹರಣೆಗಳಲ್ಲಿ (ಲೆಕ್ಕಗಳಲ್ಲಿ), ಆಕೃತಿಯ ಕೆಲಸವನ್ನು ಬಿಟ್ಟು ಈ ಕೂಡಿಸುವ ಪದಗಳಲ್ಲಿ ಏನೇನು ಮಾಡಿದೆವು ನೋಡಿರಿ. ಇಂಥ ಲೆಕ್ಕಗಳನ್ನು ಆಕೃತಿ ಸಹಾಯವಿಲ್ಲದೆ ಒಮ್ಮೆಲೆ ಬಿಡಿಸಲು ಏನು ಮಾಡಬೇಕಾಗುವದು? ........ ಈ ಮುಂತಾದ ಪ್ರಶ್ನೆಗಳಿಂದ ಕೃತಿಯ ನಿಯಮವನ್ನು ಮಕ್ಕಳಿಂದ ಗೊತ್ತು ಹಚ್ಚಿಸುವದು. ಆಮೇಲೆ ಆ ನಿಯಮವನ್ನು ಸೂತ್ರರೂಪದಲ್ಲಿ ಹೇಳಿಸುವದು. |
| **೫ ಅಭ್ಯಾಸ** | (ಈ) $\frac{೧}{೯}+\frac{೪}{೯}$<br>(ಉ) $\frac{೩}{೧೨}+\frac{೫}{೧೨}+\frac{೧}{೧೨}$<br>(ಊ) $\frac{೫}{೧೮}+\frac{೭}{೧೮}+\frac{೨}{೧೮}+\frac{೩}{೧೮}$ | ವಿಷಯದ ವಿಭಾಗದಲ್ಲಿ ಬರೆದ ಲೆಕ್ಕಗಳನ್ನು ಕಲಿತ ನಿಯಮದ ಸಹಾಯದಿಂದ ಬಿಡಿಸಲಿಕ್ಕೆ ಹೇಳುವದು. |
| **೬ ಗೃಹಪಾಠ** | (ಎ) $\frac{೭}{೨೫}+\frac{೯}{೨೫}+\frac{೩}{೨೫}$<br>(ಏ) $\frac{೧೨}{೪೮}+\frac{೯}{೪೮}+\frac{೧೭}{೪೮}+\frac{೫}{೪೮}$ | ವಿಷಯದ ವಿಭಾಗದಲ್ಲಿ ಬರೆದ ಲೆಕ್ಕಗಳನ್ನು ಮಕ್ಕಳಿಗೆ ಮನೆಯಲ್ಲಿ ಮಾಡಲಿಕ್ಕೆ ಹೇಳಿ ಪಾಠವನ್ನು ಮುಗಿಸುವದು. |

# ೯ ನಿದರ್ಶನಗಳು

ಕಲಿಸುವಿಕೆಯು ಯಶಸ್ವಿಯಾಗಬೇಕಾದರೆ, ಕಲಿಸತಕ್ಕ ವಿಷಯವು ಮಕ್ಕಳಿಗೆ ಸ್ಪಷ್ಟವೂ ನಿಸ್ಸಂದಿಗ್ಧವೂ ಆಗಬೇಕು; ಅವರ ಅವಧಾನವು ಪಾಠದಲ್ಲಿ ಉಳಿಯಬೇಕು; ಹಾಗು ಆ ವಿಷಯವನ್ನು ಕುರಿತು ಅವರಿಗೆ ಮಾನಸಿಕ ಚಟುವಟಿಕೆಯು ದೊರೆಯಬೇಕು. ಇದು ಸಾಧ್ಯವಾಗಬೇಕಾದರೆ ಶಿಕ್ಷಕನು ಅನೇಕ ನಿದರ್ಶನಗಳನ್ನೂ ದೃಷ್ಟಾಂತಗಳನ್ನೂ ಉಪಯೋಗಿಸಬೇಕಾಗುತ್ತದೆ. ನಿದರ್ಶನಗಳಲ್ಲಿ (ಅ) ಮೂರ್ತ ನಿದರ್ಶನಗಳು, ಮತ್ತು (ಆ) ಅಮೂರ್ತ ಅಥವಾ ಶಾಬ್ದಿಕ ನಿದರ್ಶನಗಳು ಎಂದು ಎರಡು ಪ್ರಕಾರಗಳು.

## (ಅ) ಮೂರ್ತ ನಿದರ್ಶನಗಳು

೧ **ಪ್ರತ್ಯಕ್ಷ ವಸ್ತುಗಳು :—** ಯಾವದೊಂದು ಪ್ರಾಣಿ, ಸಸಿ, ಹೂವು ಇವೇ ಮೊದಲಾದವುಗಳ ಬಗ್ಗೆ ಕಲಿಸುವದಿದ್ದಾಗ ಅವುಗಳನ್ನೇ ಹುಡುಗರ ಮುಂದೆ ತಂದು ತೋರಿಸಬಹುದು. ಉದಾಹರಣಾರ್ಥವಾಗಿ, ಗುಲಾಬಿ ಹೂವಿನ ವಿಷಯವಾಗಿ ಹೇಳುವದಿದ್ದಾಗ ಒಂದು ಗುಲಾಬಿ ಹೂವನ್ನೇ ಮಕ್ಕಳಿಗೆ ತೋರಿಸಬಹುದು. ಆದರೆ ಎಲ್ಲ ಪಾಠಗಳಲ್ಲಿಯೂ ಪ್ರತ್ಯಕ್ಷ ವಸ್ತುಗಳನ್ನು ಉಪಯೋಗಿಸುವದು ಸಾಧ್ಯವಿಲ್ಲ. ಆನೆ, ಒಂಟೆ, ಹಾವು ಮುಂತಾದ ಪ್ರಾಣಿಗಳನ್ನು ವರ್ಗದ ಕೋಣೆಯಲ್ಲಿ ತರಲಾದೀತೆ?

೨ **ಚಿತ್ರಗಳು :—** ಇವುಗಳಲ್ಲಿ ಫೋಟೋಗ್ರಾಫುಗಳೂ, ಅಚ್ಚು ಹಾಕಿದ ಚಿತ್ರಗಳೂ, ಕೈಯಿಂದ ತೆಗೆದ ಚಿತ್ರಗಳೂ ಸಮಾವೇಶವಾಗುತ್ತವೆ. ಈಗಂತೂ ಎಷ್ಟೋ ಫೋಟೋಗ್ರಾಫುಗಳು ಬಹಳ ಕಡಿಮೆ

ಬೆಲೆಗೆ ದೊರೆಯುತ್ತವೆ. ಅಲ್ಲದೆ ವರ್ತಮಾನಪತ್ರ, ಮಾಸಿಕ ಪತ್ರಿಕೆ, ಇನ್ನಿತರ ಪುಸ್ತಕಗಳಲ್ಲಿ ಚಿತ್ರಗಳು ಹೇರಳವಾಗಿ ದೊರೆಯುತ್ತವೆ. ಶಿಕ್ಷಕನು ಯಾವಾಗಲೂ ಸಾಧ್ಯವಿದ್ದಷ್ಟು ಚಿತ್ರಗಳನ್ನು ಸಂಗ್ರಹಿಸುತ್ತಲೇ ಇರಬೇಕು; ಎಂದರೆ ಅವುಗಳನ್ನು ಸಮಯೋಚಿತವಾಗಿ ಉಪಯೋಗಿಸಿಕೊಳ್ಳಲಿಕ್ಕೆ ಅನುವಾಗುವದು. ಒಮ್ಮೊಮ್ಮೆ ಚಿಕ್ಕ ಚಿತ್ರಗಳನ್ನು ದೊಡ್ಡ ಪ್ರಮಾಣದಲ್ಲಿ ತೋರಿಸಲಿಕ್ಕೆ ಇಲ್ಲವೆ ಹಲವು ಕಾಲ್ಪನಿಕ ಸಂಗತಿಗಳನ್ನು ನಿರ್ದಿಷ್ಟಗೊಳಿಸಲಿಕ್ಕೆ ಕೈ ಬರೆಹದ ಚಿತ್ರಗಳನ್ನು ಉಪಯೋಗಿಸಬೇಕಾಗುತ್ತದೆ.

೩ **ಮಾದರಿಗಳು** :— ಪ್ರತ್ಯಕ್ಷ ವಸ್ತುಗಳ ಚಿಕ್ಕ ಮಾದರಿಗಳು, ಗ್ಲೋಬುಗಳು, ಪ್ರಯೋಗ ಶಾಲೆಯ (laboratory) ವಿವಿಧ ವಸ್ತುಗಳು ಇವುಗಳ ಮೂಲಕ ಮಕ್ಕಳ ಎಷ್ಟೋ ತಪ್ಪು ಕಲ್ಪನೆಗಳು ದೂರಾಗುವವಲ್ಲದೆ ಅವರಿಗೆ ವಿಷಯ ಜ್ಞಾನವೂ ಸಾಕಷ್ಟು ಸ್ಪಷ್ಟವಾಗುವದು. ಪೃಥ್ವಿಯ ಗ್ಲೋಬಿನ ಮೂಲಕ ಪೃಥ್ವಿಯ ಆಕಾರ,ಪ್ರಾಣಿಗಳ ಮಾದರಿಗಳ ಮೂಲಕ ಅವುಗಳ ಸ್ವರೂಪ, ಯಂತ್ರಗಳ ಮೂಲಕ ಯಾಂತ್ರಿಕ ತತ್ತ್ವ, ಹೀಗೆ ಅನೇಕ ಸಂಗತಿಗಳ ನಿರ್ದಿಷ್ಟ ಜ್ಞಾನವನ್ನು ಮಕ್ಕಳಿಗೆ ಸುಲಭವಾಗಿ ಮಾಡಿಕೊಡಬಹುದು.

೪ **ಆಕೃತಿಗಳು** :— ನಕಾಶ, ಪಟ, ಗ್ರಾಫು ಮುಂತಾದ ಆಕೃತಿಗಳು ಒಂದು ತರದ ಚಿತ್ರಗಳೆಂದೇ ಹೇಳಬಹುದು. ಯಾಕಂದರೆ ಇವು ಚಿತ್ರಗಳಂತೆ ಹಲವು ವಿಶಿಷ್ಟ ಸಂಗತಿಗಳ ನಿರ್ದಿಷ್ಟ ಕಲ್ಪನೆಯನ್ನು ಮಾಡಿಕೊಡುತ್ತವೆ. ಬೇರೆಬೇರೆ ದೇಶಗಳ ಸ್ಥಾನಮಾನ, ಅವುಗಳ ಮೇರೆ, ಅವುಗಳ ಪರಸ್ಪರ ಸಂಬಂಧ, ಅವುಗಳಲ್ಲಿರುವ ಪರ್ವತ, ಹೊಳೆ, ಮುಖ್ಯಪಟ್ಟಣ ಮೊದಲಾದ ಅನೇಕ ಸಂಗತಿಗಳನ್ನು ಕಲಿಸಲು ನಕಾಶಗಳು ಅತ್ಯಂತ ಉಪಯುಕ್ತವಾದ ಸಾಧನಗಳಾಗಿವೆ. ಹಾಗೆಯೇ ಕಾಲಗಣನೆ, ವಂಶಾವಳಿ ಮುಂತಾದ ಐತಿಹಾಸಿಕ ಸಂಗತಿಗಳನ್ನು ಉದಾಹರಿಸಲಿಕ್ಕೆ ಗ್ರಾಫುಗಳು ಅತ್ಯಂತ ಉಪಯುಕ್ತವಾದ ಸಾಧನಗಳೆಂಬುದು ಪ್ರತಿಯೊಬ್ಬ ಶಿಕ್ಷಕನಿಗೂ ಗೊತ್ತಿದ್ದ ಸಂಗತಿಯಾಗಿದೆ.

ಮೇಲೆ ಕಾಣಿಸಿದ ಬಗೆಬಗೆಯ ಮೂರ್ತ ನಿದರ್ಶನಗಳನ್ನು ಹೇಗೆ ಮತ್ತು ಎಂಥ ಸಂದರ್ಭಗಳಲ್ಲಿ ಉಪಯೋಗಿಸಬೇಕೆಂಬುದನ್ನು ಶಿಕ್ಷಕನು ಗೊತ್ತುಮಾಡಿಕೊಳ್ಳುವದು ಅತ್ಯಗತ್ಯ. ಸುಮ್ಮಸುಮ್ಮನೆ ನಿದರ್ಶನಗಳನ್ನು ಉಪಯೋಗಿಸಿದರೆ ಪ್ರಯೋಜನಕ್ಕೆ ಬದಲಾಗಿ ವೇಳೆಯ ಅಪವ್ಯಯವಾಗುವ ಸಂಭವವೇ ಹೆಚ್ಚು. ಮೂರ್ತ ನಿದರ್ಶನಗಳ ಉಪಯೋಗದ ವಿಷಯದಲ್ಲಿ ಶಿಕ್ಷಕರಿಗೆ ಕೆಳಗಿನ ಸಾಮಾನ್ಯ ಸೂಚನೆಗಳನ್ನು ಕೊಡಬಹುದು.

೧ **ನಿದರ್ಶನಗಳು ಯಾವದೊಂದು ನಿರ್ದಿಷ್ಟವಾದ ಉದ್ದೇಶವನ್ನೊಳಗೊಂಡಿರಬೇಕು.** ಯಾವದೊಂದು ಸಂಗತಿಯನ್ನು ಕಲಿಸುವಾಗ ಅದನ್ನು ವಿಶದೀಕರಿಸುವದರ ಸಲುವಾಗಿ ನಿದರ್ಶನವು ಅತ್ಯಗತ್ಯವಿದೆ ಎಂದು ಕಂಡುಬಂದರೆ ಮಾತ್ರ ಅದನ್ನು ಉಪಯೋಗಿಸಬೇಕು.

೨ **ನಿದರ್ಶನಗಳನ್ನು ಸಮಯೋಚಿತವಾಗಿ ಉಪಯೋಗಿಸಬೇಕು.** ಬೇಡವಾದಾಗ ಸುಮ್ಮಸುಮ್ಮನೆ ನಿದರ್ಶನಗಳನ್ನು ಉಪಯೋಗಿಸಿದರೆ ವ್ಯರ್ಥ ಕಾಲಹರಣವಾಗುವದೆಂಬುದರಲ್ಲಿ ಸಂದೇಹವಿಲ್ಲ.

೩ **ಅನೇಕ ನಿದರ್ಶನಗಳನ್ನು ಉಪಯೋಗಿಸಬೇಕಾದ ಸಂದರ್ಭದಲ್ಲಿ ಅವುಗಳನ್ನು ಉಪಯೋಗಿಸುವ ಕ್ರಮವನ್ನು ಮೊದಲೇ ಸಿದ್ಧಪಡಿಸಿಕೊಳ್ಳಬೇಕು.** ಶಿಕ್ಷಕನು ತನಗೆ ಬೇಕಾದ ಎಲ್ಲ ನಿದರ್ಶನಗಳನ್ನು ಅಗತ್ಯಕಂಡಾಗ ತಾತ್ಕಾಲಿಕ ಉಪಯೋಗಕ್ಕೆ ಬರುವಂತೆ ಮೊದಲೇ ಅಳವಡಿಸಿಕೊಳ್ಳಬೇಕು.

೪ **ಮಕ್ಕಳಿಗೆ ನಿದರ್ಶನಗಳನ್ನು ತೋರಿಸುವ ಪೂರ್ವದಲ್ಲಿ ಅವುಗಳನ್ನು ಕುರಿತು ಅವರ ಮನಸ್ಸನ್ನು ಮೊದಲೇ ಸಿದ್ಧಗೊಳಿಸಬೇಕು.** ನಿದರ್ಶನಕ್ಕೆ ಸಬಂಧಿಸಿದ ಯಾವ ಯಾವ ಸಂಗತಿಗಳನ್ನು ಮಕ್ಕಳು ನಿರೀಕ್ಷಿಸಬೇಕೆಂಬುದನ್ನು ಮೊದಲೇ ತಿಳಿಸದಿದ್ದರೆ ಅವರು ಆ ನಿದರ್ಶನದ ನಿಜವಾದ ಮಹತ್ತ್ವವನ್ನೇ ಕಂಡುಕೊಳ್ಳಲಿಕ್ಕಿಲ್ಲ.

೫ **ನಿದರ್ಶನಗಳನ್ನು ಕುರಿತು ಮಕ್ಕಳಿಗೆ ಮಾನಸಿಕ ಚಟುವಟಿಕೆ ದೊರೆಯಬೇಕು.** ತೋರಿಸಿದ ನಿದರ್ಶನಗಳನ್ನು ಕುರಿತು

ಶಿಕ್ಷಕನು ಪ್ರಶ್ನೆಮಾಡುವ ಪರಿಪಾಠವಿಟ್ಟರೆ ಅವುಗಳ ಮಹತ್ತ್ವವನ್ನು ತಿಳಿದುಕೊಳ್ಳಲು ಮಕ್ಕಳು ಸಹಜವಾಗಿ ಮಾನಸಿಕ ಪ್ರಯತ್ನವನ್ನು ಮಾಡುವರು.

**೬ ನಿದರ್ಶನಗಳನ್ನು ವರ್ಗದ ಎಲ್ಲ ಮಕ್ಕಳಿಗೂ ಚನ್ನಾಗಿ ಕಾಣುವಂತೆ ಇರಿಸಬೇಕು.** ಇಲ್ಲವಾದರೆ ಅವುಗಳಿಂದ ಏನೂ ಪ್ರಯೋಜನವಾಗದು.

೭ ಸಾಧ್ಯವಿದ್ದಷ್ಟು **ವಿವಿಧ ನಿದರ್ಶನಗಳನ್ನು ಉಪಯೋಗಿಸಬೇಕು.** ಎಂದರೆ, ನಿದರ್ಶನಗಳಲ್ಲಿ ಸಾಕಷ್ಟು ವೈವಿಧ್ಯವಿರಬೇಕು. ಹಾಗಿಲ್ಲದಿದ್ದರೆ ಮಕ್ಕಳಿಗೆ ಅವು ರುಚಿಸಲಾರವು.

## ( ಆ ) ಶಾಬ್ದಿಕ ನಿದರ್ಶನಗಳು

ಗಹನ ವಿಷಯುಗಳನ್ನು ವಿಶದೀಕರಿಸಲಿಕ್ಕೂ ಅಸ್ಫುಟವಾದ ಅನುಭವ ಸಂಗತಿಗಳನ್ನು ಸ್ಪಷ್ಟಗೊಳಿಸಲಿಕ್ಕೂ ಶಾಬ್ದಿಕ ನಿದರ್ಶನಗಳು ಮೂರ್ತ ನಿದರ್ಶನಗಳಷ್ಟೇ ಉಪಯುಕ್ತವಾದವುಗಳಾಗಿವೆ. ಯಾವದೊಂದು ಸಂಗತಿಯು ಮಕ್ಕಳಿಗೆ ತಿಳಿಯಲು ಸುಲಭ ಸಾಧ್ಯವಿರದಿದ್ದರೆ ಅದನ್ನು ಕಥೆ, ದೃಷ್ಟಾಂತ, ಉಪಮೆ, ಸಾಮ್ಯ, ಉದಾಹರಣೆ, ವರ್ಣನೆ ಮುಂತಾದ ಅನೇಕ ಶಾಬ್ದಿಕ ನಿದರ್ಶನಗಳ ಮೂಲಕ ಸಹಜವಾಗಿ ತಿಳಿಸಿಕೊಡಬಹುದು. ಮಕ್ಕಳಿಗೆ ಬೇಸರವುಂಟಾದಾಗ ಅವರ ಅವಧಾನವನ್ನು ದೊರಕಿಸಲು ಚಿತ್ತಾಕರ್ಷಕವಾದ ವರ್ಣನೆ, ವೃತ್ತಾಂತ, ಕಥೆ, ವಿನೋದೋಕ್ತಿಗಳು ಎಷ್ಟು ಸಹಾಯಕವಾಗಿರುವವೆಂಬುದು ಪ್ರತಿಯೊಬ್ಬ ಅನುಭವಿಕ ಶಿಕ್ಷಕನಿಗೂ ಗೊತ್ತಿದ್ದ ಮಾತಾಗಿದೆ. ಮಕ್ಕಳ ಕಲ್ಪನಾ ಸಾಮರ್ಥ್ಯವನ್ನು ಪ್ರಚೋದನೆಗೊಳಿಸಲಿಕ್ಕೆ ಮತ್ತು ಅವರಲ್ಲಿ ಭಾವೋದ್ರೇಕವನ್ನುಂಟುಮಾಡಿ ಅವರ ಕರ್ತೃತ್ವ ಶಕ್ತಿಯನ್ನು ಬಲವಾಗಿ ಪ್ರೇರಿಸಲಿಕ್ಕೆ ಶಬ್ದದಷ್ಟು ಉಪಯುಕ್ತವಾದ ಸಾಧನವು ಬೇರೊಂದಿಲ್ಲ. ಶಾಬ್ದಿಕ ನಿದರ್ಶನಗಳ ಉಪಯೋಗವನ್ನು ಕುರಿತು ಶಿಕ್ಷಕರು ಕೆಳಗೆ ಕೊಟ್ಟ ಸೂಚನೆಗಳನ್ನು ಲಕ್ಷ್ಯದಲ್ಲಿಡಬೇಕು.

**೧ ಮಕ್ಕಳ ಅನುಭವ ಪ್ರಪಂಚಕ್ಕೆ ಸಂಬಂಧಿಸಿದ ನಿದರ್ಶನಗಳನ್ನೇ ಉಪಯೋಗಿಸಬೇಕು.** ಅವರ ಅನುಭವಕ್ಕೆ ಬಾರದ ಸಂಗತಿಗಳನ್ನು ಹೇಳುವದರಿಂದ ಏನೂ ಪ್ರಯೋಜನವಾಗದು.

**೨ ನಿದರ್ಶನಗಳು ತಿಳಿಯಲು ಸುಲಭ ಸಾಧ್ಯವಿರಬೇಕು.** ಉದ್ದ ಹಾಗು ಸಂಕೀರ್ಣವಾದ ಕಥೆ, ಸೂಕ್ಷ್ಮ, ಸಾಮ್ಯ ಇಲ್ಲವೆ ಅನೇಕ ವಿವರಗಳನ್ನೊಳಗೊಂಡ ದೃಷ್ಟಾಂತ, ಇವುಗಳಿಂದ ಮಕ್ಕಳು ಗೊಂದಲ ದಲ್ಲಿ ಬೀಳುವರೇ ಹೊರತು ಮೂಲ ವಿಷಯುವನ್ನು ಚನ್ನಾಗಿ ತಿಳಿದು ಕೊಳ್ಳಲಾರರು.

**೩ ನಿದರ್ಶನಗಳು ವಿಷಯವನ್ನು ಸ್ಪಷ್ಟಗೊಳಿಸುವಂತಿರ ಬೇಕು.** ಹಾಗೆ ಇರದಿದ್ದರೆ ಉದಾಹರಿಸಿದ ಉದಾಹರಣೆಗಳಿಂದ ಪ್ರಯೋಜನವೇನು? ಅವುಗಳಿಂದ ವ್ಯರ್ಥ ಕಾಲಹರಣವಾಗುವದಲ್ಲದೆ ಮಕ್ಕಳಿಗೆ ತಪ್ಪು ತಿಳುವಳಿಕೆಯೂ ಬೇಸರವೂ ಉಂಟಾಗುವವು.

**೪ ನಿದರ್ಶನಗಳು ಸುಲಭವಾದ ಭಾಷೆಯಲ್ಲಿರಬೇಕು.** ಗಹನವಾದ ಭಾಷೆಯಿಂದ ವಿಷಯವು ಮತ್ತಿಷ್ಟು ಕಠಿಣವಾಗುವದೇ ಹೊರತು ಸುಲಭವೆಂದೂ ಆಗಲಾರದು.

**೫ ವಿಷಯವು ಸುಲಭವೂ ಸ್ಪಷ್ಟವೂ ಆಗುವಂತೆ ಸಾಕಷ್ಟು ನಿದರ್ಶನಗಳನ್ನು ಉಪಯೋಗಿಸಬೇಕು.** ನಿದರ್ಶನಗಳನ್ನು ಹೇರಳವಾಗಿ ಉಪಯೋಗಿಸಬೇಕೆಂದು ಕೆಲವರೂ, ಆದಷ್ಟು ಕಡಿಮೆ ಉಪಯೋಗಿಸಬೇಕೆಂದು ಕೆಲವರೂ ಅಭಿಪ್ರಾಯಪಡುತ್ತಾರೆ. ವಿಚಾರ ಮಾಡಿ ನೋಡಿದರೆ ಅವುಗಳನ್ನು ಹೆಚ್ಚಾಗಿ ಉಪಯೋಗಿಸುವದರ ಬದ ಲಾಗಿ ಕಡಿಮೆ ಉಪಯೋಗಿಸಿದರೆ ಮಾತ್ರ ಹಾನಿ ತಟ್ಟುವ ಸಂಭವ ವುಂಟು.

**೬ ಹೇಳಬೇಕಾದ ನಿದರ್ಶನಗಳನ್ನು ಮುಂಚಿತವಾಗಿಯೇ ವಿಚಾರ ಮಾಡಿಟ್ಟುಕೊಂಡಿರಬೇಕು.** ಸಂದರ್ಭಾನುಸಾರವಾಗಿ

ಯೋಗ್ಯ ನಿದರ್ಶನಗಳನ್ನು ಉಪಯೋಗಿಸುವದು ಸುಲಭ ಸಾಧ್ಯವಲ್ಲ. ಪಾಠವನ್ನು ಹೇಳುವಾಗ ಒಮ್ಮೊಮ್ಮೆ ಆಕಸ್ಮಾತ್ತಾಗಿ ಅನೇಕ ನಿದರ್ಶನಗಳನ್ನು ಉಪಯೋಗಿಸುವ ಪ್ರಸಂಗ ಬರುವದು. ಇಂಥ ಆಕಸ್ಮಿಕ ಪ್ರಸಂಗಗಳನ್ನು ಕುರಿತು ಮುಂದಾಲೋಚನೆ ಮಾಡಿ ನಿದರ್ಶನಗಳನ್ನು ಆಳವಡಿಸಿಕೊಂಡಿರುವದು ಒಳ್ಳೆಯದು.

**೭ ನಿದರ್ಶನಗಳಲ್ಲಿ ವೈವಿಧ್ಯ ಇರಬೇಕು.** ಮೇಲಿಂದ ಮೇಲೆ ಅವೇ ಕಥೆ, ದೃಷ್ಟಾಂತ, ಉದಾಹರಣೆ, ವರ್ಣನೆ, ವಿನೋದೋಕ್ತಿಗಳನ್ನು ಉಪಯೋಗಿಸಿದರೆ, ಅವು ಎಷ್ಟೇ ಸಮಂಜಸವಿದ್ದರೂ ಮಕ್ಕಳಿಗೆ ರುಚಿಸಲಾರವು.

# ೧೦ ಕಪ್ಪು ಹಲಿಗೆ

ಪಾಠವು ಮನೋರಂಜಕವೂ ಮಕ್ಕಳಲ್ಲಿ ಆಸಕ್ತಿ ಹುಟ್ಟಿಸುವಂತ ಹದೂ ಆಗಬೇಕೆಂದು ಪ್ರತಿಯೊಬ್ಬ ಶಿಕ್ಷಕನೂ ಇಚ್ಛಿಸುತ್ತಾನೆ. ಈ ಇಚ್ಛೆಯು ಈಡೇರಬೇಕಾದರೆ, ಚಿತ್ರ, ನಕಾಶ, ಆಕೃತಿ ಮುಂತಾದ ಅನೇಕ ಮೂರ್ತ ನಿದರ್ಶನಗಳನ್ನು ಅವನು ಉಪಯೋಗಿಸಬೇಕಾಗುವ ದೆಂಬುದನ್ನು ಹಿಂದೆ ಹೇಳಿದೆ. ಇಂಥ ಉಪಕರಣಗಳಲ್ಲಿ ಕಪ್ಪು ಹಲಿಗೆಯು ಅತ್ಯಂತ ಶ್ರೇಷ್ಠವಾದದ್ದು. ಅದು ಶಿಕ್ಷಕನ ಕಾಮಧೇನು, ಜೀವದ ಗೆಳೆಯ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಪ್ರತಿಯೊಂದು ಶಾಲೆಯಲ್ಲಿ ಎಲ್ಲ ಬಗೆಯ ಚಿತ್ರಗಳನ್ನೂ, ನಕಾಶ-ಗಳನ್ನೂ ಸಂಗ್ರಹಿಸುವದು ಅಸಾಧ್ಯವು. ಒಂದು ವೇಳೆ ಸಾಧ್ಯವಿದ್ದರೂ ಅವುಗಳನ್ನು ಕಾದಿಡಲು ಯೋಗ್ಯ ಸ್ಥಳದ ಅಭಾವವು ಕಂಡು ಬರುವದು. ಆದರೆ ಕರಿಯ ಹಲಿಗೆಯು ಮಾತ್ರ ಎಲ್ಲ ಶಾಲೆಗಳಲ್ಲಿಯೂ ಸುಲಭವಾಗಿ ದೊರೆಯುವದು. ಕಪ್ಪು ಹಲಿಗೆಯನ್ನು ಶಿಕ್ಷಕನು ನಾನಾಬಗೆಯಿಂದ ಉಪಯೋಗಿಸಿಕೊಳ್ಳಬಹುದು. ಅದನ್ನು ಮುಖ್ಯವಾಗಿ ಪಾಠದ ಮಹತ್ತ್ವದ ಮುದ್ದೆಗಳನ್ನು ಬರೆಯಲಿಕ್ಕೂ ಆಕೃತಿ, ನಕಾಶ, ಚಿತ್ರ ಮುಂತಾದವುಗಳನ್ನು ತೆಗೆಯಲಿಕ್ಕೂ ಗಣಿತ ಪಾಠದಲ್ಲಿ ಲೆಕ್ಕಗಳನ್ನು ಬಿಡಿಸುವದಕ್ಕೂ ಉಪಯೋಗಿಸಬಹುದು. ಯಾವದೊಂದು ದೇಶದ ಭೌಗೋಲಿಕ ಜ್ಞಾನವನ್ನು ಮಾಡಿಕೊಡುವಾಗ ಆ ದೇಶದ ಒಂದು ಬಾಹ್ಯರೇಷೆಯ ನಕಾಶವನ್ನು ತೆಗೆದು ಕಲಿಸಬೇಕಾದ ಸಂಗತಿಗಳನ್ನು ಅದರಲ್ಲಿ ಕ್ರಮೇಣ ತುಂಬುತ್ತ ಹೋಗಬಹುದು. ಇತಿಹಾಸ ಪಾಠದಲ್ಲಿ ರಾಜ್ಯವಿಸ್ತಾರವನ್ನೂ ಹಾಗೆಯೇ ತುಂಬುತ್ತ ಹೋಗಬಹುದು. ಕಾಲ ರೇಷೆ, ವಂಶವೃಕ್ಷ, ರಣಭೂಮಿಯ ನಕ್ಷೆ ಮೊದಲಾದವುಗಳನ್ನು ಸಹ

ಕೂಡಲೆ ಎಳೆದು ತೋರಿಸಬಹುದು; ಮತ್ತು ಪಾಠವು ಮುಂದೆ ಮುಂದೆ ಸಾಗಿದಂತೆ ಅದರ ಪ್ರತಿಯೊಂದು ಭಾಗದ ಸಾರಾಂಶವನ್ನು ಬರೆಯುತ್ತ ಹೋಗಬಹುದು. ಶಿಕ್ಷಕನು ಕಪ್ಪು ಹಲಿಗೆಯನ್ನು ಸಮಯೋಚಿತವಾಗಿ ಉಪಯೋಗಿಸುವದರಿಂದ ಪಾಠಕ್ಕೆ ಮೂರ್ತ ಸ್ವರೂಪ ಬರುತ್ತದೆ.

ಕಪ್ಪು ಹಲಿಗೆಯ ಮೇಲೆ ಶಿಕ್ಷಕನು ಚಿತ್ರ, ಆಕೃತಿ, ನಕಾಶ ಮುಂತಾದವುಗಳನ್ನು ತೆಗೆಯಬೇಕೆಂದು ಹೇಳಿದರೆ ಅವನು ಅವಶ್ಯವಾಗಿ ಚಿತ್ರಗಾರನಾಗಬೇಕೆಂದು ತಿಳಿಯಕೂಡದು. ಅವನಿಗೆ ಬರಿಯ ಗೆರೆಗಳಿಂದ ಸಾದಾ ಆಕೃತಿಗಳನ್ನೂ ಚಿತ್ರಗಳನ್ನೂ ಕೂಡಲೆ ತೆಗೆಯಲು ಬಂದರೆ ಸಾಕು.

ಶಿಕ್ಷಕನು ಕಪ್ಪು ಹಲಿಗೆಯ ಮೇಲೆ ಪಾಠದ ಸಾರಾಂಶವನ್ನು ಬರೆಯುವಾಗ ಇಲ್ಲವೆ ಆಕೃತಿ, ನಕಾಶಗಳನ್ನು ತೆಗೆಯುವಾಗ ಅವಶ್ಯಕಂಡಲ್ಲಿ ಬಣ್ಣದ ಖಡುವನ್ನು ಉಪಯೋಗಿಸುವದು ಒಳ್ಳೆಯದು. ಕರಿಯ ಹಲಿಗೆಯ ಮೇಲಿನ ಬರೆಹವು ಅಚ್ಚುಕಟ್ಟಾಗಿರತಕ್ಕದ್ದು. ಅಕ್ಷರಗಳು ದುಂಡಗೆ ಮತ್ತು ದೊಡ್ಡ ಪ್ರಮಾಣದಲ್ಲಿರಬೇಕು. ಕರಿಯ ಹಲಿಗೆಯನ್ನು ವರ್ಗದ ಎದುರಿನಲ್ಲಿ, ಎಂದರೆ, ಅದರ ಮೇಲಿನ ಬರೆಹವು ಪ್ರತಿಯೊಬ್ಬ ವಿದ್ಯಾರ್ಥಿಗೂ ಸ್ಪಷ್ಟವಾಗಿ ಕಾಣಿಸುವಂತೆ ಇರಿಸತಕ್ಕದ್ದು.

# ೧೧ ಪ್ರಶ್ನೆಗಳು

ಶಿಕ್ಷಣ ಕಾರ್ಯದಲ್ಲಿ ಪ್ರಶ್ನೆಯ ಮಹತ್ತ್ವವನ್ನು ಸಂಪೂರ್ಣವಾಗಿ ತಿಳಿದಿರುವ ಶಿಕ್ಷಕರು ಅತಿ ವಿರಳ. ಶಿಕ್ಷಕನ ಯೋಗ್ಯತೆಯನ್ನು ಅವನು ಪ್ರಶ್ನೆಮಾಡುವ ಕೌಶಲ್ಯದಿಂದ ಸಹಜವಾಗಿ ತಿಳಿದುಕೊಳ್ಳಬಹುದು. ಪ್ರಶ್ನೆ ಮಾಡುವ ಕಲೆಯನ್ನು ತಕ್ಕ ಮಟ್ಟಿಗಾದರೂ ಕೈವಶಮಾಡಿಕೊಳ್ಳದಿದ್ದರೆ ಯಾವ ಶಿಕ್ಷಕನೂ ಯಶಸ್ವಿಯಾಗಲಾರನು. ಪ್ರಶ್ನೆಯು ಕಲಿಸುವಿಕೆಯ ಜೀವಾಳ. ಮಕ್ಕಳಲ್ಲಿ ಮಾನಸಿಕ ಚಟುವಟಿಕೆಯನ್ನು ಪ್ರೇರಿಸಲಿಕ್ಕೂ ಅವರಲ್ಲಿ ಹೊಸಹೊಸ ಕಲ್ಪನೆಗಳನ್ನು ಹುಟ್ಟಿಸಲಿಕ್ಕೂ ಅವರ ವಿಚಾರ ಗಳನ್ನು ಸರಿಯಾದ ದಾರಿಗೆ ತರಲಿಕ್ಕೂ ಅವರಿಂದ ಅನುಮಾನ-ನಿರ್ಣಯ ಗಳನ್ನು ಹೊರಡಿಸಲಿಕ್ಕೂ ಪ್ರಶ್ನೆಯಷ್ಟು ಪ್ರಯೋಜನಕಾರಿಯಾದ ಸಾಧ ನವು ಇನ್ನೊಂದು ಇಲ್ಲೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಆದುದರಿಂದ ಪ್ರಶ್ನೆಯ ಸ್ವರೂಪವನ್ನೂ ಅದರ ಉಪಯುಕ್ತತೆಯ ವ್ಯಾಪ್ತಿಯನ್ನೂ ಚನ್ನಾಗಿ ತಿಳಿದುಕೊಳ್ಳುವದು ಅತ್ಯಾವಶ್ಯಕವು.

**ಪ್ರಶ್ನೆಯ ಪ್ರಯೋಜನಗಳು :—** ಕಲಿಸುವ ಕ್ರಮದಲ್ಲಿ ಪ್ರಶ್ನೆಯ ಪ್ರಯೋಜನಗಳನ್ನು ಕುರಿತು ಇಲ್ಲಿ ಸಂಪೂರ್ಣವಾಗಿ ವಿವೇಚಿಸು ವದು ಅಸಾಧ್ಯ. ಮಹತ್ತ್ವವೆನಿಸಿದ ಕೆಲವು ಪ್ರಯೋಜನಗಳನ್ನು ಮಾತ್ರ ಕೆಳಗೆ ವಿವರಿಸಿದೆ.

**೧ ಪ್ರಶ್ನೆಯಿಂದ ಮಕ್ಕಳ ಜ್ಞಾನವನ್ನು ಪರೀಕ್ಷಿಸಲು ಅನು ಕೂಲವಾಗುತ್ತದೆ.** ಇಲ್ಲಿ ಜ್ಞಾನವನ್ನು (ಅ) ಕಲಿಸಬೇಕಾದ ವಿಷ ಯಕ್ಕೆ ಸಂಬಂಧಿಸಿದ ಮಕ್ಕಳ ಪೂರ್ವಜ್ಞಾನ, ಮತ್ತು (ಅ) ಹೊಸದಾಗಿ ಕಲಿಸಿದ ಜ್ಞಾನ ಎಂದು ಎರಡು ವಿಧವಾಗಿ ವಿಂಗಡಿಸಬಹುದು. ಇವೆ ರಡೂ ವಿಧವಾದ ಜ್ಞಾನವನ್ನು ಪರೀಕ್ಷಿಸಲು ಪ್ರಶ್ನೆಯು ಸಹಾಯಕ

ವಾಗುತ್ತದೆ. ಪಾಠದ ಆರಂಭದಲ್ಲಿ ಮಕ್ಕಳ **ಪೂರ್ವ** ಜ್ಞಾನವನ್ನು ಕಂಡುಕೊಳ್ಳಲಿಕ್ಕೆ ಕೇಳುವ ಪ್ರಶ್ನೆಗಳಿಗೆ **ಪೀಠಿಕೆಯ ಪ್ರಶ್ನೆ**ಗಳೆಂದು ಹೇಳಬಹುದು. ಪೀಠಿಕೆಯ ಪ್ರಶ್ನೆಗಳಿಂದ ಪ್ರಸ್ತುತ ಪಾಠದ ವಿಷಯವನ್ನು ಕುರಿತು ಮಕ್ಕಳಿಗೆ ಮೊದಲೇ ಗೊತ್ತಿರುವ ಸಂಗತಿಗಳನ್ನು ಕಂಡುಹಿಡಿದು ಅವುಗಳಿಗೆ ಹೊಸ ಸಂಗತಿಗಳನ್ನು ಅನುಬಂಧಿಸಲಿಕ್ಕೆ ಅನುಕೂಲವಾಗುವದು. ಇದಲ್ಲದೆ, ಶಿಕ್ಷಕನು ಒಂದು ಪಾಠವನ್ನು ಕಲಿಸಿದ ಬಳಿಕ ಇಲ್ಲವೆ ಆದರ ಒಂದೊಂದು ಭಾಗ ಮುಗಿದ ಮೇಲೆ, ಅದು ಮಕ್ಕಳಿಗೆ ಎಷ್ಟರಮಟ್ಟಿಗೆ ತಿಳಿದಿದೆ, ಆ ತಿಳಿವಳಿಕೆಯು ಎಷ್ಟರಮಟ್ಟಿಗೆ ಸರಿಯಾಗಿದೆ, ಎಂಬುದನ್ನೂ ಪ್ರಶ್ನೆಗಳ ಮೂಲಕ ಕಂಡು ಹಿಡಿಯಬಹುದು. ಇಂಥ ಪ್ರಶ್ನೆಗಳಿಗೆ **ಸಿಂಹಾವಲೋಕನದ ಪ್ರಶ್ನೆ**ಗಳೆಂದು ಅನ್ನಬಹುದು.

**೨ ಪ್ರಶ್ನೆಯಿಂದ ಮಕ್ಕಳ ಅನುಭವಗಳನ್ನು ಪಾಠದ ವಿಷಯಕ್ಕೆ ಸಂಬಂಧಿಸಲು ಸಾಹಾಯ್ಯವಾಗುತ್ತದೆ.** ಮಕ್ಕಳು ಓದಿ, ಆಡಿ, ಮಾಡಿ, ನೋಡಿ, ಕೂಡಿ ತಮ್ಮ ಜೀವನದಲ್ಲಿ ಎಷ್ಟೋ ಅನುಭವಗಳನ್ನು ಹೊಂದುತ್ತಾರೆ. ಅವುಗಳಲ್ಲಿ ಸುಸಂಗತವಾದವುಗಳನ್ನು ಪಾಠಕ್ಕೆ ಸಂಬಂಧೀಕರಿಸಿ ಪಾಠದ ವಿಷಯವನ್ನು ವಿಶದೀಕರಿಸುವದು ಶಿಕ್ಷಕನು ಕೇಳುವ ಪ್ರಶ್ನೆಗಳನ್ನೇ ಅವಲಂಬಿಸಿದೆ.

**೩ ಪ್ರಶ್ನೆಯಿಂದ ಮಕ್ಕಳಲ್ಲಿ ಕುತೂಹಲವನ್ನು ಹುಟ್ಟಿಸಬಹುದು.** ಶಿಕ್ಷಕನು ಕಲಿಸಬೇಕಾದ ವಿಷಯವನ್ನು ಮಕ್ಕಳು ಕಲಿಯುವಂತೆ ಮಾಡಲು ಕುತೂಹಲವು ಅತ್ಯಂತ ಮಹತ್ತ್ವವಾದ ಪ್ರೇರಕವು. ಜಾಣ್ಮೆಯಿಂದ ಪ್ರಶ್ನೆಮಾಡಿದರೆ ಎಷ್ಟೇ ಉದಾಸೀನವುಳ್ಳ ಬಾಲಕನಿದ್ದರೂ ಅವನಲ್ಲಿ ಕುತೂಹಲವು ಜಾಗ್ರುತವಾಗಿ ಅವನು ಪಾಠವನ್ನು ತಿಳಿದುಕೊಳ್ಳಲು ಮನಃಪೂರ್ವಕವಾಗಿ ಪ್ರಯತ್ನಿಸುವನು.

**೪ ಪ್ರಶ್ನೆಯು ಕಲಿಸಿದ ಜ್ಞಾನವನ್ನು ದೃಢಗೊಳಿಸುವದು.** ಕಲಿಸಿದ ಜ್ಞಾನವು ಮಕ್ಕಳ ಮನಸ್ಸಿನಲ್ಲಿ ಚೆನ್ನಾಗಿ ನೆಲೆಗೊಳ್ಳಬೇಕಾದರೆ ಅದನ್ನು ಅವರ ಜ್ಞಾಪಕಕ್ಕೆ ಪುನಃಪುನಃ ತಂದು ಕೊಡಬೇಕಾಗುತ್ತದೆ.

ಹಾಗೆ ಮಾಡಲಿಕ್ಕೆ ಪ್ರಶ್ನೆಯು ಬಹಳ ಉಪಯುಕ್ತವಾದ ಸಾಧನವು. ಶಿಕ್ಷಕನು ಆಗಾಗ್ಗೆ ಪ್ರಶ್ನೆಕೇಳಿ ತಾನು ಕಲಿಸಿದ ಸಂಗತಿಗಳನ್ನು ಮಕ್ಕಳ ಸ್ಮರಣೆಗೆ ತಂದುಕೊಟ್ಟು ಅವುಗಳನ್ನು ಅವರ ಮನಸ್ಸಿನಲ್ಲಿ ಸ್ಥಿರಗೊಳಿಸಬಹುದು.

**೫ ಪ್ರಶ್ನೆಯು ವಿಚಾರವನ್ನು ಪ್ರಚೋದಿಸಬಲ್ಲದು.** ಮಕ್ಕಳು ತಾವಾಗಿ ವಿಚಾರಿಸಲಿಕ್ಕೆ ಪ್ರಾರಂಭಮಾಡಿದಾಗಿನಿಂದಲೇ ಅವರ ನಿಜವಾದ ಶಿಕ್ಷಣವು ಪ್ರಾರಂಭವಾಗುತ್ತದೆ. ಮಕ್ಕಳ ಮನಸ್ಸಿನಲ್ಲಿ ಹೊಸ ಹೊಸ ಕಲ್ಪನೆಗಳನ್ನು ಉತ್ಪನ್ನಮಾಡಿ ಅವರ ವಿಚಾರಗಳನ್ನು ತಕ್ಕ ಮಾರ್ಗಕ್ಕೆ ಹಚ್ಚಿ ಅವರಲ್ಲಿ ಮಾನಸಿಕ ಚಟುವಟಿಕೆಯನ್ನುಂಟುಮಾಡಲು ಪ್ರಶ್ನೆಯು ಒಂದು ಅತ್ಯಂತ ಶ್ರೇಷ್ಟವಾದ ಉಪಾಯವಾಗಿರುವದು. ಅಲ್ಲದೆ, ಕಲಿಸಿದ ಸಂಗತಿಗಳನ್ನು ತುಲನೆಮಾಡಹಚ್ಚಿ ಅವರಿಂದ ಅನುಮಾನ ನಿರ್ಣಯಗಳನ್ನೂ ಹೊರಡಿಸಿಕೊಳ್ಳಬಹುದು.

**೬ ಮಕ್ಕಳು ಕಲಿತ ಜ್ಞಾನವನ್ನು ಪ್ರಶ್ನೆಯಿಂದ ಕ್ರಮಗೊಳಿಸಲು ಸಾಧ್ಯವಾಗುವದು.** ವಿದ್ಯಾರ್ಥಿಗಳಿಗೆ ಕೇವಲ ವಿಷಯ ಜ್ಞಾನವನ್ನು ಮಾಡಿಕೊಟ್ಟರೆ ಸಾಲದು. ಅದು ಅವರ ಮನಸ್ಸಿನ ಭಾಗವಾಗಿ ಪರಿಣಮಿಸಬೇಕು. ಅಂದರೆ ಮಾತ್ರ ಅವರಿಗೆ ಅದನ್ನು ವ್ಯವಹಾರದಲ್ಲಿ ಉಪಯೋಗಿಸಲಿಕ್ಕೆ ಬರುತ್ತದೆ. ಹಾಗೆ ಮಾಡಲಿಕ್ಕೆ ಕಲಿಸಿದ ಜ್ಞಾನವನ್ನು ಸುಸಂಬದ್ಧವಾಗುವಂತೆ ವ್ಯವಸ್ಥೆಗೊಳಿಸಬೇಕಾಗುತ್ತದೆ. ಅದಕ್ಕಾಗಿ ಶಿಕ್ಷಕನು ಮಕ್ಕಳ ಪೂರ್ವಜ್ಞಾನಕ್ಕೆ ತಾನು ಕಲಿಸಿದ ಹೊಸ ಜ್ಞಾನವನ್ನು ಕ್ರಮಬದ್ಧವಾಗುವಂತೆ ಜೋಡಿಸಬೇಕು. ಕಲಿಸಿದ ಜ್ಞಾನದ ಪುನರಾವರ್ತನ, ಪುನರ್ವಿಮರ್ಶೆ ಮಾಡಲಿಕ್ಕೂ ಅದನ್ನು ಹಿಂದಿನ ಜ್ಞಾನಕ್ಕೆ ಸಂಯೋಜಿಸಿ ಕ್ರಮಗೊಳಿಸಲಿಕ್ಕೂ ಪ್ರಶ್ನೆಯು ಅಗತ್ಯವಾದ ಸಾಧನವಾಗಿದೆ.

**೭ ಪ್ರಶ್ನೆಯಿಂದ ಮಕ್ಕಳ ಅವಧಾನವನ್ನು ದೊರಕಿಸುವದು ಸುಲಭ ಸಾಧ್ಯವಾಗುವದು.** ಅವಧಾನವನ್ನು ದೊರಕಿಸುವ ಅನೇಕ ಉಪಾಯಗಳಲ್ಲಿ ಪ್ರಶ್ನೆಯು ಬಹಳ ಸುಲಭವಾದದ್ದು. ಪಾಠನಡೆದಾಗ

ಆಗಾಗ್ಗೆ ಪ್ರಶ್ನೆಕೇಳಿದರೆ ಮಕ್ಕಳ ಲಕ್ಷವು ಸಹಜವಾಗಿ ಅದರ ಕಡೆಗೆ ಹತ್ತುವದು. ಒತ್ತಾಯದಿಂದ ಅದು ಎಂದೂ ಹತ್ತಲಾರದು. ವಿಚಾರ ಪ್ರಚೋದಕವಾದ ಪ್ರಶ್ನೆಗಳಿಂದ ಅವರ ಅವಧಾನವು ಮಾತ್ರವಲ್ಲದೆ ಜಿಜ್ಞಾಸೆಯೂ ಜಾಗ್ರತವಾಗುವದು.

**೮ ಪ್ರಶ್ನೆಗಳ ಮೂಲಕ ಮಕ್ಕಳಲ್ಲಿ ರಸಗ್ರಹಣ ಶಕ್ತಿಯನ್ನು ಬೆಳೆಯಿಸಬಹುದು.** ಮಕ್ಕಳು ತಮ್ಮಷ್ಟಕ್ಕೆ ತಾವೇ ವಿಚಾರ ಮಾಡುವಂತೆ ಅವರನ್ನು ಪ್ರೇರಿಸಲಿಕ್ಕೂ ಅವರಲ್ಲಿ ಬೌದ್ಧಿಕ ಆಸಕ್ತಿಗಳನ್ನು ಹುಟ್ಟಿಸಲಿಕ್ಕೂ ಪ್ರಶ್ನೆಯು ಸಹಾಯಕವಾಗುತ್ತದೆಂದು ಹಿಂದೆ ಹೇಳಿದೆ. ಹಾಗೆಯೇ ಅದು ಹಲವು ವಿಶಿಷ್ಟ ಸಂಗತಿಗಳ ವಿಷಯದಲ್ಲಿ ಅವರನ್ನು ಪ್ರೋತ್ಸಾಹಿಸಲಿಕ್ಕೆ ಇಲ್ಲವೆ ನಿರುತ್ಸಾಹಗೊಳಿಸಲಿಕ್ಕೆ—ಅವರು ಅವುಗಳನ್ನು ಸೇರುವಂತೆ ಇಲ್ಲವೆ ತಿರಸ್ಕರಿಸುವಂತೆ-ಪ್ರೇರಿಸಲಿಕ್ಕೆ ಅದು ಸಾಹಾಯ್ಯವಾಗುತ್ತದೆ. ಗ್ರೀಕ ತತ್ತ್ವಜ್ಞಾನಿಯಾದ **ಪ್ಲೇಟೋ** ಒಂದು ಕಡೆಗೆ ಹೇಳಿದಂತೆ ಯೋಗ್ಯವಾದುದನ್ನು ಮೆಚ್ಚುವದು, ಅಯೋಗ್ಯವಾದುದನ್ನು ತಿರಸ್ಕರಿಸುವದು, ಇದೇ ರಸಗ್ರಹಣದ ಮೂಲ, ಅಭಿರುಚಿಯ ತಳಹದಿ.

**೯ ಪ್ರಶ್ನೆಯು ಮಕ್ಕಳನ್ನು ಅಭ್ಯಾಸ ಮಾಡಲಿಕ್ಕೆ ಹಚ್ಚಬಲ್ಲದು.** ಕಲಿಸಿದ ವಿಷಯಗಳನ್ನು ಮಕ್ಕಳು ಅಭ್ಯಾಸ ಮಾಡಿರುವರೋ ಇಲ್ಲವೋ ಎಂಬುದನ್ನು ತಿಳಿದುಕೊಳ್ಳಲಿಕ್ಕೆ ಆಗಾಗ್ಗೆ ಅವರ ಪರೀಕ್ಷೆಯನ್ನು ತೆಗೆದುಕೊಳ್ಳುವದು ಅಗತ್ಯವು. ಪರೀಕ್ಷೆಯನ್ನು ಸಾಮಾನ್ಯವಾಗಿ ಪ್ರಶ್ನೆಗಳ ಮೂಲಕವೇ ನಡೆಯಿಸಬೇಕಾಗುತ್ತದೆ. ಪರೀಕ್ಷೆಯ ಕಾಲದಲ್ಲಿ ಕೇಳುವ ಪ್ರಶ್ನೆಗಳಿಗೆ **ಪರೀಕ್ಷೆಯ ಪ್ರಶ್ನೆ**ಗಳೆಂಬ ಹೆಸರು. ಪರೀಕ್ಷೆಯಲ್ಲಿ ಪಾಸಾಗಬೇಕೆಂಬ ಹಂಬಲದಿಂದ ವಿದ್ಯಾರ್ಥಿಗಳು ಎಷ್ಟು ಶ್ರಮವಹಿಸಿ ಅಭ್ಯಾಸಮಾಡುತ್ತಾರೆಂಬುದು ಪ್ರತಿಯೊಬ್ಬ ಶಿಕ್ಷಕನೂ ತಿಳಿದ ಮಾತಾಗಿದೆ.

**ಪ್ರಶ್ನೆಗಳ ಪ್ರಕಾರಗಳು :—** ಶಿಕ್ಷಕನು ಪಾಠದ ಸಮಯದಲ್ಲಿ ಮಕ್ಕಳಿಗೆ ಕೇಳಬಹುದಾದ ಪ್ರಶ್ನೆಗಳನ್ನು ಮೂರು ವಿಧವಾಗಿ ವಿಂಗಡಿಸ

ಬಹುದು :— ೧ ಪೀಠಿಕೆಯ ಪ್ರಶ್ನೆಗಳು ೨ ವಿಷಯ ವಿಕಾಸದ ಅಥವಾ ವಿವೇಚನೆಯ ಪ್ರಶ್ನೆಗಳು ೩ ಸಿಂಹಾವಲೋಕನದ ಪ್ರಶ್ನೆಗಳು.

**೧ ಪೀಠಿಕೆಯ ಪ್ರಶ್ನೆಗಳು** — ಪಾಠವನ್ನು ಪ್ರಾರಂಭಿಸುವದಕ್ಕಿಂತ ಪೂರ್ವದಲ್ಲಿ ಪ್ರಸ್ತುತ ವಿಷಯವನ್ನು ಕುರಿತು ಮಕ್ಕಳಿಗೆ ಯಾವ ಯಾವ ಸಂಗತಿಗಳು ಗೊತ್ತಿರುವವೆಂಬುದನ್ನು ತಿಳಿದುಕೊಳ್ಳಬೇಕಾಗುತ್ತದೆ. ಏಕೆಂದರೆ ಮಕ್ಕಳಿಗೆ ಕಲಿಸಬೇಕಾದ ಹೊಸ ಸಂಗತಿಗಳನ್ನು ಅವರಿಗೆ ಹಿಂದೆ ಗೊತ್ತಿದ್ದ ಸಂಗತಿಗಳಿಗೆ ಅನುಬಂಧಿಸಿದ ಹೊರತು ಅವರ ಜ್ಞಾನಾರ್ಜನೆಯ ಕಾರ್ಯವು ಸುಲಭವೂ ಸಂಪೂರ್ಣವೂ ಆಗಲಾರದು. ಮಕ್ಕಳ ಪೂರ್ವ ಜ್ಞಾನವನ್ನು ಗೊತ್ತುಹಚ್ಚಲಿಕ್ಕೆ ಕೇಳುವ ಪ್ರಶ್ನೆಗಳಿಗೆ **ಪೀಠಿಕೆಯ** ಪ್ರಶ್ನೆಗಳೆಂಬ ಹೆಸರು.

**೨ ವಿಷಯ ವಿಕಾಸ** ಅಥವಾ **ವಿವೇಚನೆಯ ಪ್ರಶ್ನೆಗಳು:**— ಪಾಠದ ವಿಷಯವು ಮಕ್ಕಳಿಗೆ ಸುಲಭವಾಗಿಯೂ ಕ್ರಮವಾಗಿಯೂ ತಿಳಿಯುವಂತೆ ಅದನ್ನು ವಿಕಾಸಗೊಳಿಸಲಿಕ್ಕೆ ಪ್ರಶ್ನೆಗಳನ್ನು ಕೇಳಬೇಕಾಗುವದು. ಅವುಗಳಿಗೆ **ವಿಷಯ ವಿಕಾಸದ** ಅಥವಾ **ವಿವೇಚನೆಯ ಪ್ರಶ್ನೆ**ಗಳೆಂದು ಕರೆಯಬಹುದು. ಈ ಪ್ರಶ್ನೆಗಳು ಮಕ್ಕಳಲ್ಲಿ ಮಾನಸಿಕ ಚಟುವಟಿಕೆಯನ್ನು ಒಂದಿಲ್ಲೊಂದು ರೀತಿಯಿಂದ ಹುಟ್ಟಿಸಬೇಕು; ಅವರ ವಿಚಾರಗಳನ್ನು ತಕ್ಕ ಮಾರ್ಗಕ್ಕೆ ಹಚ್ಚಬೇಕು; ಮತ್ತು ಅವರು ಸ್ವಂತ ಪ್ರಯತ್ನದಿಂದ ಕಲಿಯುವಂತೆ ಮಾಡಬೇಕು. ಅವು ಮುಖ್ಯವಾಗಿ ವಿಚಾರಪ್ರಚೋದಕವಾಗಿರಬೇಕಾದುದರಿಂದ ಕಲಿಸುವ ಕ್ರಮದಲ್ಲಿ ಅವುಗಳಿಗೆ ಪ್ರಾಮುಖ್ಯ ಹೆಚ್ಚು. ಮಕ್ಕಳನ್ನು ಪಾಠದ ವಿಷಯದ ಒಂದು ಮೆಟ್ಟಿನಿಂದ ಮತ್ತೊಂದಕ್ಕೆ ಕ್ರಮವಾಗಿ ಒಯ್ಯುತ್ತ ಇಡಿಯ ಪಾಠವನ್ನು ವಿಕಾಸಗೊಳಿಸಬೇಕಾದರೆ ಶಿಕ್ಷಕನು ನಾನಾ ಪ್ರಕಾರದ ಪ್ರಶ್ನೆಗಳನ್ನು ಕೇಳಬೇಕಾಗುವದು ಅವನು ಮಕ್ಕಳಿಗೆ ಎರಡು ಸಂಗತಿಗಳನ್ನು ತುಲನೆಮಾಡಹಚ್ಚಿ ಅವುಗಳ ಸಾಮ್ಯ ವೈಷಮ್ಯಗಳನ್ನು ಕಂಡು ಹಿಡಿಯಲಿಕ್ಕೆ ಹೇಳಬಹುದು; ಹಲವು ವಿಶಿಷ್ಟ ಸಂಗತಿಗಳನ್ನು ಕುರಿತು ಅವರ ಅಭಿಪ್ರಾಯಗಳನ್ನು ಕೇಳಿಕೊಳ್ಳಬಹುದು;

ಒಂದು ನಿಯಮವನ್ನು ಕೊಟ್ಟು ಅದನ್ನು ಉದಾಹರಿಸಲಿಕ್ಕೆ ಹೇಳಬಹುದು, ಅಥವಾ ಅದಕ್ಕೆ ಸಂಬಂಧಿಸಿದ ಮತ್ತೊಂದು ನಿಯಮವನ್ನು ಗೊತ್ತುಹಚ್ಚುವಂತೆ ಮಾಡಬಹುದು; ಕಾರ್ಯದಿಂದ ಕಾರಣಕ್ಕೂ ಕಾರಣದಿಂದ ಕಾರ್ಯಕ್ಕೂ ಒಯ್ಯಬಹುದು; ಹಲವು ಸಂಗತಿಗಳನ್ನು ಯಾವದೊಂದು ತತ್ತ್ವಕ್ಕನುಸರಿಸಿ ವರ್ಗೀಕರಿಸಲಿಕ್ಕೆ ಹೇಳಬಹುದು; ಇತ್ಯಾದಿ. ಇಂಥ ಪ್ರಶ್ನೆಗಳನ್ನು ಶಿಕ್ಷಕನು ಅತ್ಯಂತ ಜಾಗರೂಕತೆಯಿಂದ ರಚಿಸತಕ್ಕದ್ದು.

೩ **ಸಿಂಹಾವಲೋಕನದ ಪ್ರಶ್ನೆಗಳು** :— ಪಾಠವಾಗಲಿ ಇಲ್ಲವೆ ಪಾಠದ ಒಂದೊಂದು ಭಾಗವಾಗಲಿ ಮುಗಿದ ಮೇಲೆ ಕಲಿಸಿದ ವಿಷಯದ ಸಾರಾಂಶವನ್ನು ಹೊರಡಿಸಿಕೊಳ್ಳಲಿಕ್ಕೆ ಕೇಳುವ ಪ್ರಶ್ನೆಗಳಿಗೆ **ಸಿಂಹಾವಲೋಕನದ** ಪ್ರಶ್ನೆಗಳೆಂದೆನ್ನಬಹುದು. ಇಂಥ ಪ್ರಶ್ನೆಗಳಿಂದ ಹೊಸ ಜ್ಞಾನವನ್ನು ಮಕ್ಕಳ ಪೂರ್ವಜ್ಞಾನಕ್ಕೆ ಸುವ್ಯವಸ್ಥಿತ ರೀತಿಯಿಂದ ಸಂಯೋಜಿಸಿ ಅದನ್ನು ದೃಢಗೊಳಿಸಲಿಕ್ಕೆ ಅನುಕೂಲವಾಗುವದು.

**ಉತ್ತಮ ಪ್ರಶ್ನೆಗಳ ಲಕ್ಷಣಗಳು** :— ಪ್ರಶ್ನೆ ಕೇಳುವದು ಒಂದು ಮಹತ್ತ್ವದ ಕಲೆಯಾಗಿದೆ. ಈ ಕಲೆಯನ್ನು ಹಸ್ತಗತ ಮಾಡಿಕೊಳ್ಳದೆ ಹೋದರೆ ಯಾವ ಶಿಕ್ಷಕನೂ ತನ್ನ ಕೆಲಸದಲ್ಲಿ ಯಶಸ್ಸನ್ನು ದೊರಕಿಸಲಾರನು ಪ್ರತಿಯೊಂದು ಪಾಠದಲ್ಲಿಯೂ ಪ್ರಶ್ನೆಗಳನ್ನು ಕೇಳಬೇಕಾಗುವದರಿಂದ ಶಿಕ್ಷಕನು ತಾನು ಕೇಳಬೇಕಾದ ಪ್ರಶ್ನೆಗಳನ್ನು ಮುಂಚಿತವಾಗಿಯೇ ಆಲೋಚಿಸಿ ರಚಿಸತಕ್ಕದ್ದು. ಪ್ರಶ್ನೆಗಳಲ್ಲಿ ಮುಖ್ಯವಾಗಿ ಕೆಳಗಿನ ಲಕ್ಷಣಗಳು ಇರತಕ್ಕದ್ದು:—

೧ **ಪ್ರಶ್ನೆಯು ಯಾವದೊಂದು ಉದ್ದೇಶವನ್ನೊಳಗೊಂಡಿರಬೇಕು.** ಉದ್ದೇಶವಿಲ್ಲದ ಪ್ರಶ್ನೆಗಳಿಂದ ವೇಳೆಯ ದುರುಪಯೋಗವಾಗುವದೇ ಹೊರತು ಯಾವ ಪ್ರಯೋಜನವೂ ಆಗಲಾರದು. ಅವುಗಳಿಂದ ಮಕ್ಕಳಲ್ಲಿ ಬೇಸರವೂ ನಿರುತ್ಸಾಹವೂ ಮಾತ್ರ ಉಂಟಾಗುವವು.

**೨ ಪ್ರಶ್ನೆಯು ಸಂಕ್ಷೇಪವೂ ಸುಲಭವೂ ಆಗಿರಬೇಕು.** ಪ್ರಶ್ನೆಯು ಉದ್ದವೂ ತೊಡಕಿನದೂ ಆಗಿದ್ದರೆ ಅದರ ಅರ್ಥವು ಮಕ್ಕಳ ಮನಸ್ಸಿಗೆ ಒಮ್ಮೆಲೆ ಹೊಳೆಯಲಾರದು. ಹಾಗೆಯೇ, ಬಳಕೆಯಲ್ಲಿಲ್ಲದ ಶಬ್ದಗಳನ್ನಾಗಲಿ ಕ್ಲಿಷ್ಟಪದಗಳನ್ನಾಗಲಿ ಉಪಯೋಗಿಸಿದರೆ ಮಕ್ಕಳು ಗೊಂದಲದಲ್ಲಿ ಬೀಳುವರು. "ಶಾಯಿಸ್ತೆಖಾನನು ದಂಡೆತ್ತಿ ಬಂದಾಗ ಉದ್ಭವಿಸಿದ ಪ್ರತಿಕೂಲ ಪರಿಸ್ಥಿತಿಯನ್ನು ಪ್ರತಿಭಟಿಸಲು ಶಿವಾಜಿಯು ಯಾವ ಯೋಜನೆಯನ್ನು ಕಲ್ಪಿಸಿದನು?"–ಇಂಥ ಪ್ರಶ್ನೆಗಳು ಮಕ್ಕಳಿಗೆ ತೀವ್ರ ಅರ್ಥವಾಗದೆ ಅವರನ್ನು ಗೊಂದಲದಲ್ಲಿ ಮಾತ್ರ ನೂಕುವವು.

**೩ ಪ್ರಶ್ನೆಯು ಸ್ಪಷ್ಟವಿರಬೇಕು.** ನಿರ್ದಿಷ್ಟವಾದ ಉತ್ತರ ಹೊರಡುವಂತೆ ನಿಶ್ಚಿತಾರ್ಥವುಳ್ಳ ಪದಗಳನ್ನು ಉಪಯೋಗಿಸಿ ಪ್ರಶ್ನೆಗಳನ್ನು ರಚಿಸುವದು ಸುಲಭವಾದುದಲ್ಲವೆಂಬುದು ಪ್ರತಿಯೊಬ್ಬ ಅನುಭವಿಕ ಶಿಕ್ಷಕನಿಗೆ ಗೊತ್ತುಂಟು. ಅಸ್ಪಷ್ಟವಾದ ಹಾಗು ಸಂದೇಹಾರ್ಥವುಳ್ಳ ಪ್ರಶ್ನೆಗಳಿಂದ ಶಿಕ್ಷಕನು ಕೇಳುತ್ತಿರುವದಾದರು ಏನು ಎಂಬುದು ಮಕ್ಕಳಿಗೆ ನಿಶ್ಚಿತವಾಗಿ ಗೊತ್ತಾಗದೆ, ಅವರು ಊಹಾ ಪೋಹೆಗಳನ್ನು ಮಾಡಲು ಪ್ರಾರಂಭಿಸುವರು. "ಈ ಚಿತ್ರದಲ್ಲಿ ನೀವು ಏನೇನು ನೋಡುವಿರಿ?" "ಮನುಷ್ಯನಿಗೆ ಉಪಯೋಗವುಳ್ಳ ಪ್ರಾಣಿಯು ಯಾವುದು?"—ಇಂಥ ಪ್ರಶ್ನೆಗಳಿಂದ ನಿಶ್ಚಿತವಾದ ಒಂದೇ ಉತ್ತರವು ಹೊರಡುವದಿಲ್ಲ.

**೪ ಪ್ರಶ್ನೆಯು ಒಂದೇ ಸಂಗತಿಯನ್ನೊಳಗೊಂಡಿರಬೇಕು.** ಒಂದು ಪ್ರಶ್ನೆಯಲ್ಲಿ ಒಂದೇ ಸಂಗತಿಯನ್ನು ಕೇಳಬೇಕು. ಅನೇಕ ಸಂಗತಿಗಳನ್ನು ಒಮ್ಮೆಲೆ ಕೇಳಿದರೆ ಅದು ಮಕ್ಕಳ ಸ್ಮರಣೆಯಲ್ಲಿ ಬಹಳ ಹೊತ್ತು ನಿಲ್ಲಲಾರದು. "ಅಫಝುಲಖಾನನನ್ನು ಯಾರು, ಎಲ್ಲಿಗೆ, ಯಾವಾಗ, ಯಾವ ಉದ್ದೇಶದಿಂದ ಕಳಿಸಿದರು?"—ಹೀಗೆ ಏಕಕಾಲಕ್ಕೆ ಅನೇಕ ಸಂಗತಿಗಳನ್ನು ಕೇಳುವ ಪ್ರಶ್ನೆಗಳಿಂದ ಮಕ್ಕಳ ಲಕ್ಷವು ಚದರಿ ಹೋಗುತ್ತದೆ. ಆದುದರಿಂದ ಒಂದೊಂದು ಸಂಗತಿಯನ್ನು ಕೇಳಿಕೊಳ್ಳಲಿಕ್ಕೆ ಒಂದೊಂದು ಪ್ರಶ್ನೆಯನ್ನೆ ರಚಿಸಬೇಕು.

**೫ ಪ್ರಶ್ನೆಗಳು ಮಕ್ಕಳ ವಯೋಮಾನಕ್ಕೂ ಬುದ್ಧಿಯ ಮಟ್ಟಕ್ಕೂ ತಕ್ಕವುಗಳಿರಬೇಕು.** ಮೇಲಿನ ವರ್ಗದ ಮಕ್ಕಳಿಗೆ ಕೇಳಬಹುದಾದ ಪ್ರಶ್ನೆಗಳನ್ನು ಕೆಳಗಿನ ವರ್ಗದ ಮಕ್ಕಳಿಗೆ ಕೇಳುವದು ನಿರರ್ಥಕವೆಂದು ಬೇರೆ ಹೇಳಬೇಕಿಲ್ಲ. ಆದರೆ ತೀರ ಕಠಿಣವಾದ ಪ್ರಶ್ನೆಗಳಿಂದ ಮಕ್ಕಳು ಎದೆಗುಂದಿ ನಿರುತ್ಸಾಹಿಗಳಾಗುತ್ತಾರೆಂದು ಮಾತ್ರ ಹೇಳಬಹುದು.

**೬ ಪ್ರಶ್ನೆಯು ವಿಚಾರ ಪ್ರಚೋದಕವಾಗಿರಬೇಕು.** ಕಲಿಸುವಿಕೆಯು ಸಫಲವಾಗಬೇಕಾದರೆ ಮಕ್ಕಳಲ್ಲಿ ಮಾನಸಿಕ ಚಟುವಟಿಕೆಯು ಉತ್ಪನ್ನವಾಗಿ ಅವರು ಸ್ವಂತ ಪ್ರಯತ್ನದಿಂದ ಕಲಿಯಲು ಉದ್ಯುಕ್ತರಾಗಬೇಕು. ಅದಕ್ಕಾಗಿ ಶಿಕ್ಷಕನು ಮಕ್ಕಳಲ್ಲಿ ವಿಚಾರಗಳನ್ನು ಹುಟ್ಟಿಸಿ ಅವುಗಳನ್ನು ತಕ್ಕ ಮಾರ್ಗಕ್ಕೆ ಹಚ್ಚುವ ಪ್ರಶ್ನೆಗಳನ್ನೇ ಕೇಳಬೇಕು. ಆದರೆ ಸಾಮಾನ್ಯವಾಗಿ ಪುನರಾವರ್ತನ ಪಾಠಗಳಲ್ಲಿ ಇಂಥ ಪ್ರಶ್ನೆಗಳಿಗೆ ಸಾಕಷ್ಟು ಸ್ಥಾನವಿಲ್ಲ.

**೭ ಪ್ರಶ್ನೆಗಳಲ್ಲಿ ಉತ್ತರವು ಅಡಗಿರಬಾರದು.** ಅನೇಕ ಸಾರೆ ಮಕ್ಕಳು ಕೊಡಬೇಕಾದ ಉತ್ತರವು ಶಿಕ್ಷಕನು ಕೇಳುವ ಪ್ರಶ್ನೆಯಲ್ಲಿಯೇ ಅಡಗಿರುತ್ತದೆ. ಅಂಥ ಪ್ರಶ್ನೆಗಳಿಂದ ಮಕ್ಕಳು ವಿಚಾರ ಮಾಡುವ ಪ್ರಸಂಗವೇ ಬರುವದಿಲ್ಲ "ಏಳು ಮೂರಲೇ ಇಪ್ಪತ್ತೊಂದು ಅಲ್ಲವೇ?", "ಲಂಡನ್ ಪಟ್ಟಣವು ಇಂಗ್ಲಂಡಿನ ರಾಜಧಾನಿಯಲ್ಲವೇ?"—ಇಂಥ ಪ್ರಶ್ನೆಗಳಿಗೆ ಉತ್ತರ ಕೊಡಲಿಕ್ಕೆ ಮಕ್ಕಳು ವಿಚಾರ ಮಾಡುವ ಅಗತ್ಯವೇ ಇರುವದಿಲ್ಲ.

**೮. "ಅಹುದು" ಅಥವಾ "ಅಲ್ಲ" ಇಷ್ಟೇ ಉತ್ತರವು ಬರುವಂಥ ಪ್ರಶ್ನೆಗಳಿರಬಾರದು.** ಇಂಥ ಪ್ರಶ್ನೆಗಳು ಮಕ್ಕಳ ವಿಚಾರಕ್ಕೆ ಆಸ್ಪದ ಕೊಡದೆ ಊಹಾಪೋಹೆಗಳಿಗೆ ಮಾತ್ರ ಅವಕಾಶವನ್ನು ಕೊಡುತ್ತವೆ. ಅಲ್ಲದೆ, ಅವುಗಳಲ್ಲಿ ಉತ್ತರವು ಅಡಗಿರುವ ಸಂಭವವೂ ಉಂಟು. "ಶಿವಾಜಿಯು ಸಂಭಾಜಿಯ ತಂದೆಯಲ್ಲವೇ?", "ದ್ರಾವಿಡರು ಹಿಂದುಸ್ತಾನದ ಮೂಲ ನಿವಾಸಿಗಳಲ್ಲವೇ?"—ಇಂಥ ಪ್ರಶ್ನೆಗಳಿಗೆ ಮಕ್ಕಳು

ಸಾಮಾನ್ಯವಾಗಿ ತರ್ಕದಿಂದ ಉತ್ತರ ಕೊಡುವದರಿಂದ ಇವುಗಳನ್ನು ಆದಷ್ಟು ಕಡಿಮೆ ಕೇಳಬೇಕು.

**೯. ಪ್ರತಿಧ್ವನಿಯ ಪ್ರಶ್ನೆಗಳಿರಬಾರದು.** ಪಾಠದ ಸಮಯದಲ್ಲಿ ಅನೇಕ ಶಿಕ್ಷಕರು ಒಂದೊಂದು ಸಂಗತಿಯನ್ನು ಹೇಳಿದಕೂಡಲೆ ಆ ಸಂಗತಿಯನ್ನು ಕುರಿತು ಒಂದು ಪ್ರಶ್ನೆಯನ್ನು ಕೇಳುವರು. ಇಂಥ ಪ್ರಶ್ನೆಗಳಿಗೆ ಪ್ರತಿಧ್ವನಿಯ ಪ್ರಶ್ನೆಗಳೆಂಬ ಹೆಸರು. ಏಕೆಂದರೆ, ಇವುಗಳಿಗೆ ಉತ್ತರವಾಗಿ ಶಿಕ್ಷಕನು ಹೇಳಿದ್ದನ್ನೇ ಮಕ್ಕಳು ಅವನ ಪ್ರತಿಧ್ವನಿಯೋ ಪಾದಿಯಲ್ಲಿ ತಿರುಗಿ ಹೇಳುವರು. ಉದಾಹರಣಾರ್ಥವಾಗಿ: 'ಬಸವೇಶ್ವರನು ಬಾಗೇವಾಡಿಯಲ್ಲಿ ಹುಟ್ಟಿದನು,' ಎಂದು ಹೇಳಿ, "ಬಸವೇಶ್ವರನು ಎಲ್ಲಿ ಹುಟ್ಟಿದನು?" ಎಂದು ಪ್ರಶ್ನೆ ಮಾಡಿದರೆ, ಮಕ್ಕಳು ವಿಚಾರ ಮಾಡದೆ ಸರಿಯಾದ ಉತ್ತರವನ್ನು ಒಮ್ಮೆಲೆ ಹೇಳಿಬಿಡುವರು. ಇಂಥ ಪ್ರಶ್ನೆಗಳು ಮಕ್ಕಳನ್ನು ವಿಚಾರಕ್ಕೆ ಹಚ್ಚುವದಿಲ್ಲವಾದುದರಿಂದ ಅವುಗಳನ್ನು ಕೇಳುವ ಚಟವು ಶಿಕ್ಷಕನಿಗೆ ಇರಬಾರದು.

**೧೦. ಸಾಮಾನ್ಯವಾಗಿ ಅರ್ಧೋಕ್ತಿಗಳನ್ನು ಪೂರ್ಣ ಮಾಡುವ ಪ್ರಶ್ನೆಗಳಿರಬಾರದು.** ಶಿಕ್ಷಕರು ತಮಗೆ ಬೇಕಾದ ಉತ್ತರದ ಶಬ್ದವೊಂದನ್ನು ಮಕ್ಕಳು ಹೇಳಿ ವಾಕ್ಯವನ್ನು ಮುಗಿಸುವಂಥ ಪ್ರಶ್ನೆಗಳನ್ನು ಕೇಳುವ ಪರಿಪಾಠವು ಹೆಚ್ಚಾಗಿ ಕಂಡುಬರುತ್ತದೆ. ಉದಾಹರಣಾರ್ಥವಾಗಿ: "ಕಲಕತ್ತೆಯು ಹಿಂದುಸ್ತಾನದ ಹಳೆಯ—ಏನಾಗಿತ್ತು?" "ನೂರಜಹಾನಳು ಜಹಾಂಗೀರನ — ಏನಾಗಿದ್ದಳು?"—ಇಂಥ ಪ್ರಶ್ನೆಗಳಿಂದ ಮಕ್ಕಳಿಗಿಂತ ಶಿಕ್ಷಕನಿಗೇ ಹೆಚ್ಚು ಕೆಲಸ ಬೀಳುವದು. ಅಲ್ಲದೆ ಇವುಗಳಿಗೆ ಉತ್ತರ ಕೊಡಲಿಕ್ಕೆ ಮಕ್ಕಳು ಹೆಚ್ಚಾಗಿ ವಿಚಾರ ಮಾಡುವ ಕಾರಣವಿಲ್ಲ. ಆದರೆ ಸಮಯವರಿತು ಶಿಕ್ಷಕನು ವಿರಳವಾಗಿ ಇವುಗಳನ್ನು ಉಪಯೋಗಿಸಬಹುದು. ಸಾಮಾನ್ಯವಾಗಿ ಚಿಕ್ಕಮಕ್ಕಳಿಗೆ ಇಂಥ ಪ್ರಶ್ನೆಗಳಿಂದ ಉತ್ತೇಜನವು ದೊರೆಯುವದು. ಹಾಗು ಭಾಷೆಯ ಪಾಠಗಳಲ್ಲಿ ಇವು ಅಲ್ಲಲ್ಲಿ ಪ್ರಯೋಜನಕ್ಕೆ ಬರುವವು.

**೧೧. ಉತ್ತರ ಹೊರಡದ ಪ್ರಶ್ನೆಗಳಿರಬಾರದು.** ಎಷ್ಟೋ ಅನುಭವವಿಲ್ಲದ ಶಿಕ್ಷಕರು ಅಸಂಬದ್ಧವಾದ ಹಾಗು ಉತ್ತರ ಕೊಡಲು ಅಸಾಧ್ಯವಾದ ಪ್ರಶ್ನೆಗಳನ್ನು ಹಾಕುವದುಂಟು. "ಎಂಟನೆಯ ಹೆನ್ರಿಯು ಅನೇಕ ಹೆಂಡಂದಿರನ್ನು ಏಕೆ ಲಗ್ನವಾದನು?", "ಶಿವಾಜಿಗೆ ಸಂಭಾಜಿ ಯಂಥ ದುಷ್ಟ ಮಗನು ಯಾಕೆ ಹುಟ್ಟಿದನು?"— ಇಂಥ ಪ್ರಶ್ನೆಗಳನ್ನು ಕೇಳುವದು ಅವಿವೇಕತನವೆಂದೇ ಹೇಳಬಹುದು.

**೧೨. ಪ್ರಶ್ನೆಗಳು ಹೊಂದಿಕೆಯಾಗಿರಬೇಕು.** ಪಾಠದ ವಿಷಯವು ಸಹಜವಾಗಿ ವಿಕಾಸಗೊಳ್ಳುವಂತೆ ಪ್ರಶ್ನೆಗಳು ಸರಪಳಿಯ ಕಳಿಗೆಗಳಂತೆ ಒಂದಕ್ಕೊಂದು ಹೊಂದಿಕೆಯಾಗಿರಬೇಕು. ಆದಕ್ಕಾಗಿ ಶಿಕ್ಷಕನು ತಾನು ಕೇಳಬೇಕಾದ ಪ್ರಶ್ನೆಗಳನ್ನು ಮುಂಚಿತವಾಗಿಯೇ ಗೊತ್ತು ಮಾಡಿಕೊಳ್ಳತಕ್ಕದ್ದು.

**ಪ್ರಶ್ನೆ ಪದ್ಧತಿಯಿಂದ ಕಲಿಸುವಾಗ ಅನುಸರಿಸತಕ್ಕ ಸೂಚನೆಗಳು:**— ವರ್ಗದಲ್ಲಿ ಪ್ರಶ್ನೆಗಳನ್ನು ಹೇಗೆ ಕೇಳಬೇಕೆಂಬ ವಿಷಯದಲ್ಲಿ ಯಾವ ನಿರ್ದಿಷ್ಟ ನಿಯಮಗಳೂ ಇಲ್ಲ. ಕೆಳಗೆ ಹೇಳಿದ ಎಲ್ಲ ಸೂಚನೆಗಳಿಗೂ ಅಪವಾದಗಳಿವೆ. ಈ ಸೂಚನೆಗಳ ಉದ್ದೇಶಗಳನ್ನು ಮಾತ್ರ ಶಿಕ್ಷಕನು ಸ್ಪಷ್ಟವಾಗಿ ತಿಳಿದುಕೊಂಡರೆ ಅವುಗಳನ್ನು ಅವನು ಅವಶ್ಯ ಕಂಡಾಗ ಉಲ್ಲಂಘಿಸಬಹುದು.

**೧. ಪ್ರಶ್ನೆಗಳನ್ನು ಇಡೀ ವರ್ಗಕ್ಕೆ ಹಾಕಿ ಬಳಿಕ ಉತ್ತರ ಹೇಳಲಿಕ್ಕೆ ಒಬ್ಬನನ್ನು ಆರಿಸಬೇಕು.** ಹೀಗೆ ಮಾಡುವದರಿಂದ ಮುಖ್ಯವಾಗಿ ಮೂರು ಪ್ರಯೋಜನಗಳು ಉಂಟಾಗುವವು. ಮೊದಲನೆಯದಾಗಿ, ಸಾಮಾನ್ಯವಾಗಿ ವರ್ಗದ ಎಲ್ಲ ಮಕ್ಕಳ ಅವಧಾನವು ದೊರಕುವದು. ಪ್ರತಿಯೊಬ್ಬ ವಿದ್ಯಾರ್ಥಿಯು ತಾನು ಉತ್ತರ ಕೊಡಬೇಕಾಗಬಹುದೆಂಬ ಭೀತಿಯಿಂದ ಪಾಠದ ಕಡೆಗೆ ಲಕ್ಷ್ಯ ಕೊಡುವನು. ಎರಡನೆಯದಾಗಿ, ಎಲ್ಲ ಮಕ್ಕಳಿಗೂ ಮನಸ್ಸಿನಲ್ಲಿಯೇ ತಾತ್ಪೂರ್ತಿಕ ಉತ್ತರವನ್ನು ಸಿದ್ಧ ಮಾಡಿಟ್ಟುಕೊಳ್ಳಲು ಅವಕಾಶ ದೊರೆಯುವದು. ಪ್ರಶ್ನೆಯನ್ನು ವರ್ಗದ ಯಾವನೊಬ್ಬ ಬಾಲಕನಿಗೆ ಹಾಕಿದರೆ ಉಳಿದವ

ರೆಲ್ಲರೂ ಅದರ ಉತ್ತರದ ಬಗ್ಗೆ ವಿಚಾರವನ್ನು ಮಾಡದೆ ಇರುವ ಸಂಭವ ವುಂಟು. ಮೂರನೆಯದಾಗಿ, ಕೇಳಿದ ಪ್ರಶ್ನೆಗೆ ಯಾವನೊಬ್ಬ ಬಾಲಕನು ಉತ್ತರ ಕೊಟ್ಟಾಗ ಉಳಿದ ಬಾಲಕರ ಲಕ್ಷವೆಲ್ಲ ಆ ಉತ್ತರದ ಕಡೆಗೆ ಧಾವಿಸುವದು. ಏಕೆಂದರೆ, ಆ ಪ್ರಶ್ನೆಗೆ ಒಂದು ಉತ್ತರವನ್ನು ಪ್ರತಿ ಯೊಬ್ಬನೂ ತನ್ನ ಮನಸ್ಸಿನಲ್ಲಿ ಮಾಡಿಟ್ಟುಕೊಂಡಿರುತ್ತಾನೆ. ಕೊಟ್ಟ ಉತ್ತರವು ತಪ್ಪಿದ್ದರೆ ಬಾಲಕರೆಲ್ಲರು ತಮ್ಮ ಉತ್ತರವನ್ನು ಹೇಳಲು ಉತ್ಸುಕರಾಗುತ್ತಾರೆ.

೨. **ಪ್ರಶ್ನೆಗಳನ್ನು ವರ್ಗದ ಎಲ್ಲ ಮಕ್ಕಳಲ್ಲಿ ಸಾಧ್ಯವಿದ್ದಷ್ಟು ಸರಿಯಾಗಿ ಹಂಚಬೇಕು.** ವಾಡಿಕೆಯಾಗಿ ಉತ್ತರಗಳನ್ನು ಕೊಡಬಲ್ಲ ಮಕ್ಕಳಿಗೆ ಮಾತ್ರ ಪ್ರಶ್ನೆ ಕೇಳುವ ಪ್ರವೃತ್ತಿಯು ಶಿಕ್ಷಕರಲ್ಲಿ ಕಂಡುಬರು ತ್ತದೆ. ಪ್ರಶ್ನೆಗಳನ್ನು ಎಲ್ಲ ಮಕ್ಕಳಿಗೆ ಕೇಳದೆ ಕೆಲವರಿಗೆ ಮಾತ್ರ ಕೇಳುತ್ತ ಹೋದರೆ ಉಳಿದ ಮಕ್ಕಳಲ್ಲಿ ನಿರುತ್ಸಾಹವೂ ಉದಾಸೀನತೆಯೂ ಉಂಟಾಗಿ ಅವರು ಪಾಠದ ಕಡೆಗೆ ಗಮನವನ್ನೇ ಕೊಡುವದಿಲ್ಲ. ಒಮ್ಮೊಮ್ಮೆ ಶಿಕ್ಷಕರು ಹೆಚ್ಚು ಜಾಗರೂಕತೆಯಿಂದ ಮಕ್ಕಳಿಗೆಲ್ಲ ಅನು ಕ್ರಮವಾಗಿ ಪ್ರಶ್ನೆ ಕೇಳುತ್ತ ಹೋಗುವರು. ಆದರೆ ಹೀಗೆ ಮಾಡುವದು ಸಮಂಜಸವೆನಿಸಲಾರದು. ಏಕೆಂದರೆ, ಮಕ್ಕಳು ತಮ್ಮ ಸರತಿ ಬರುವ ವರೆಗೆ ವ್ಯಾಕುಲದಿಂದ ಇಲ್ಲವೆ ಉದಾಸೀನತೆಯಿಂದ ಕುಳಿತುಕೊಳ್ಳ ಬೇಕಾಗುವದು.

೩. **ಪ್ರಶ್ನೆ ಕೇಳಿದಮೇಲೆ ಮಕ್ಕಳಿಗೆ ವಿಚಾರ ಮಾಡಲಿಕ್ಕೆ ಸಾಕಷ್ಟು ಅವಧಿಯನ್ನು ಕೊಡಬೇಕು.** ಎಷ್ಟೋ ಶಿಕ್ಷಕರು ಪ್ರಶ್ನೆ ಕೇಳಿದ ಮೇಲೆ ಅಧಿಕವಾದ ಆತುರತೆಯಿಂದ ಮಕ್ಕಳಿಗೆ ವಿಚಾರ ಮಾಡ ಲಿಕ್ಕೆ ಅವಕಾಶವನ್ನೇ ಕೊಡುವದಿಲ್ಲ. ತಾವು ಕೇಳಿದ ಪ್ರಶ್ನೆಯ ಉತ್ತರವು ತಮಗೆ ಗೊತ್ತಿರುವುದರಿಂದ ಮಕ್ಕಳು ಕೇಳಿದ ಪ್ರಶ್ನೆಯನ್ನು ಚನ್ನಾಗಿ ತಿಳಿದುಕೊಂಡು ಅದರ ಬಗ್ಗೆ ಸಾರಾಸಾರ ವಿಚಾರಮಾಡಿ ಒಳಿಕ ತಮ್ಮ ಉತ್ತರವನ್ನು ಯೋಗ್ಯವಾದ ಭಾಷೆಯಲ್ಲಿ ಹೇಳಬೇಕಾಗುವದೆಂಬ ಸಂಗತಿ ಯನ್ನು ಶಿಕ್ಷಕರು ಗಮನಿಸುವದೇ ಇಲ್ಲ. ಉತ್ತರಗಳನ್ನು ಅವಸರದಿಂದ

ಕೇಳಿಕೊಂಡರೆ ಮಕ್ಕಳಿಗೆ ವಿಚಾರ ಮಾಡದೆ ಉತ್ತರ ಕೊಡುವ ಚಟವು ಹತ್ತುವದು.

೪. **ಸಾಮಾನ್ಯವಾಗಿ ಒಂದೇ ಪ್ರಶ್ನೆಯನ್ನು ಪುನಃ ಪುನಃ ಕೇಳಬಾರದು.** ವರ್ಗದ ಮಕ್ಕಳಿಗೆಲ್ಲ ಸ್ಪಷ್ಟವಾಗಿ ಕೇಳಿಸುವಂತೆ ಗಟ್ಟಿಯಾಗಿ ಒಮ್ಮೆ ಮಾತ್ರ ಪ್ರಶ್ನೆಯನ್ನು ಕೇಳಬೇಕು. ಕೇಳಿದಾಗೊಮ್ಮೆ ಶಿಕ್ಷಕನು ಪುನಃ ಪ್ರಶ್ನೆಯನ್ನು ಹೇಳುವನೆಂದು ಮಕ್ಕಳಿಗೆ ಗೊತ್ತಾದರೆ ಅವರು ಪಾಠದ ಕಡೆಗೆ ಲಕ್ಷ್ಯಗೊಡುವದನ್ನೇ ಬಿಟ್ಟುಬಿಡಬಹುದು. ಯಾವನೊಬ್ಬ ವಿದ್ಯಾರ್ಥಿಯ ಲಕ್ಷ್ಯವು ಪ್ರಶ್ನೆಯ ಕಡೆಗೆ ಇದ್ದಿಲ್ಲವೆಂದು ಕಂಡು ಬಂದರೆ ಅವನನ್ನು ಬಿಟ್ಟು ಮತ್ತೊಬ್ಬನಿಂದ ಉತ್ತರವನ್ನು ತೆಗೆದುಕೊಳ್ಳಬೇಕು. ಹೀಗೆ ಮಾಡುವದರಿಂದ ಅವನಿಗೆ ನಾಚಿಕೆಯೆನಿಸಿ ಮತ್ತೊಂದು ಸಾರೆ ಚನ್ನಾಗಿ ಗಮನಕೊಡುತ್ತಾನೆ.

೫. **ಒಮ್ಮೊಮ್ಮೆ ಮಾತ್ರ ಲಕ್ಷ್ಯವಿಲ್ಲದ ಮಕ್ಕಳನ್ನು ಬುದ್ಧಿಪೂರ್ವಕವಾಗಿ ಪ್ರಶ್ನಿಸಬೇಕು.** ಹಾಗೆ ಮಾಡುವದರಿಂದ ಪಾಠದ ಕಡೆಗೆ ಅವರು ಅವಧಾನವನ್ನು ಕೊಡುತ್ತಾರೆ.

೬. **ಶಿಕ್ಷಕನು ಸಾವಧಾನದಿಂದಲೂ ಆತ್ಮವಿಶ್ವಾಸದಿಂದಲೂ ಪ್ರಶ್ನೆ ಕೇಳಬೇಕು.** ಅವನು ಮಕ್ಕಳಲ್ಲಿ ಮಮತೆ ತೋರಿಸಿ ಅವರನ್ನು ಪದೇ ಪದೇ ಪ್ರೋತ್ಸಾಹಿಸುತ್ತ ಅವರಲ್ಲಿ ವಿಶ್ವಾಸವನ್ನೂ ಧೈರ್ಯವನ್ನೂ ಹುಟ್ಟಿಸಬೇಕು. ಈ ತೆರನಾದ ವರ್ತನೆಯಿಂದ ಮಕ್ಕಳಲ್ಲಿ ಧೈರ್ಯ ಹುಟ್ಟಿ ಅವರ ವಿಚಾರಗಳಿಗೆ ಪ್ರೇರಣೆ ದೊರಕುವದು; ಉತ್ತರವನ್ನು ಕೊಡಲು ಅವರು ಮನಃಪೂರ್ವಕವಾಗಿ ಪ್ರಯತ್ನಿಸುವರು.

೭ **ಶಿಕ್ಷಕನು ಸಂದರ್ಭಾನುಸಾರವಾಗಿ ಪ್ರಶ್ನೆಗಳನ್ನು ಮಾರ್ಪಡಿಸುವ ಜಾಣತನವನ್ನು ತೋರಿಸಬೇಕು.** ಅವನು ಎಷ್ಟೇ ಮುಂದಾಲೋಚನೆಮಾಡಿ ತನ್ನ ಪ್ರಶ್ನೆಗಳನ್ನು ಸಿದ್ಧಪಡಿಸಿಕೊಂಡರೂ ಒಮ್ಮೊಮ್ಮೆ ಪ್ರಶ್ನೆಗಳನ್ನು ಬದಲಾಯಿಸಬೇಕಾದ ಪ್ರಸಂಗಗಳು ಪಾಠದ ಸಮಯದಲ್ಲಿ ತಲೆದೋರುವವು. ಅಂಥ ಸಂದರ್ಭಗಳಲ್ಲಿ

ಅನುಭವಿಕನೂ ತನ್ನ ವಿಷಯವನ್ನು ಚನ್ನಾಗಿ ಬಲ್ಲವನೂ ಆದ ಶಿಕ್ಷಕನಿಗೆ ಪ್ರಶ್ನೆಗಳನ್ನು ಮಾರ್ಪಡಿಸುವದು ದುಸ್ತರವೆನಿಸಲಾರದು.

**೮ ಮಕ್ಕಳು ಪ್ರಶ್ನೆ ಕೇಳುವಂತೆ ಅವರನ್ನು ಹುರುದುಂಬಿಸಬೇಕು.** ಮಕ್ಕಳ ಮನಸ್ಸೆಂಬ ಬರಿದಾದ ಪಾತ್ರೆಯಲ್ಲಿ ಜ್ಞಾನವನ್ನು ತುಂಬುವದು ಶಿಕ್ಷಣವಲ್ಲ. ಮಕ್ಕಳು ತಾವೇ ಹೆಚ್ಚು ಹೆಚ್ಚು ವಿಚಾರಮಾಡಿ ಪ್ರಶ್ನೆಕೇಳಿದಷ್ಟು ಹೆಚ್ಚು ಹೆಚ್ಚು ಶಿಕ್ಷಣ ಹೊಂದುತ್ತಾರೆ. ಆದುದರಿಂದ ಮಕ್ಕಳಿಗೆ ಪ್ರಶ್ನೆ ಕೇಳಹಚ್ಚಿ ವರ್ಗದ ಕೆಲಸದಲ್ಲಿ ಅವರ ಸಹಕಾರವನ್ನು ಶಿಕ್ಷಕನು ಪಡೆಯತಕ್ಕದ್ದು. ಅದರಿಂದ ಮಕ್ಕಳಿಗೆ ವಿಷಯ ಜ್ಞಾನವು ಚನ್ನಾಗಿ ಆಗಿ ಅವರ ಜ್ಞಾನಕ್ಕೆ ನಿಷ್ಕೃಷ್ಟತೆಯುಂಟಾಗುವದು; ಅವರಲ್ಲಿ ಧೈರ್ಯವೂ ವಿಶ್ವಾಸವೂ ಹೆಚ್ಚಾಗುವವು; ಮತ್ತು ಶಾಲೆಯ ಕೆಲಸವು ಶಿಕ್ಷಕನಿಗೆ ಮಾತ್ರ ಸಂಬಂಧಿಸದೆ ತಮಗೂ ಸಂಬಂಧಿಸಿರುವದೆಂಬ ಭಾವನೆಯು ಅವರಲ್ಲಿ ಹುಟ್ಟುವದು. ಒಮ್ಮೊಮ್ಮೆ ವರ್ಗವನ್ನು ಎರಡು ಪಕ್ಷಗಳಾಗುವಂತೆ ವಿಂಗಡಿಸಿ, ಒಂದು ಪಕ್ಷದ ಬಾಲಕರು ಮತ್ತೊಂದು ಪಕ್ಷದವರಿಗೆ ಪ್ರಶ್ನೆಕೇಳುವಂತೆ ಮಾಡಬಹುದು. ಈ ಕೆಲಸವು ಒಂದು ಆಟದೋಪಾಯದಲ್ಲಿ ನಡೆದು ಮಕ್ಕಳ ಮನಸ್ಸಿಗೆ ಅಧಿಕವಾದ ಚಟುವಟಿಕೆಯು ದೊರೆಯುವದು. ಆದರೆ ಮಕ್ಕಳು ಗಲಭೆ ಮಾಡದಂತೆ ಶಾಂತರೀತಿಯಿಂದ ಯೋಗ್ಯವಾದ ಪ್ರಶ್ನೋತ್ತರಗಳನ್ನು ಕೇಳಿಕೊಳ್ಳುವಂತೆ ವ್ಯವಸ್ಥೆಯನ್ನಿಡತಕ್ಕದ್ದು.

# ೧೨ ಉತ್ತರಗಳು

ಕಲಿಸುವ ಕ್ರಮದಲ್ಲಿ ಪ್ರಶ್ನೆಕೇಳುವ ಕೌಶಲ್ಯಕ್ಕೆ ಇರುವಷ್ಟೇ ಮಹತ್ತ್ವವು ಉತ್ತರ ತೆಗೆದುಕೊಳ್ಳುವ ಜಾಣತನಕ್ಕೂ ಇರುವದು. ಮಕ್ಕಳು ಉತ್ತರಕೊಡಲು ಪ್ರಯತ್ನಿಸುವಂತೆ ಅವರನ್ನು ಪ್ರೋತ್ಸಾಹಿಸುವದು, ಅವರು ಕೊಟ್ಟ ತಪ್ಪು ಉತ್ತರಗಳನ್ನು ತಿದ್ದುವದು ಸುಲಭವಾದ ಕೆಲಸವಲ್ಲ. ಮಕ್ಕಳು ಕೊಟ್ಟ ಉತ್ತರಗಳಿಂದ ಅವರ ಮನಸ್ಸಿನಲ್ಲಿ ನಡೆದ ವಿಚಾರಗಳನ್ನು ತಿಳಿದುಕೊಳ್ಳಲಿಕ್ಕೆ ಹಾಗು ಅವರು ಕೊಟ್ಟ ಉತ್ತರಗಳಲ್ಲಿ ದೋಷಗಳು ಇದ್ದರೆ ಅವುಗಳ ಮೂಲವನ್ನು ಗೊತ್ತುಹಚ್ಚಲಿಕ್ಕೆ ಜಾಣತನವೂ ಅನುಭವವೂ ಬೇಕಾಗುತ್ತವೆ. ಇಲ್ಲಿ ಮಾತ್ರ ಶಿಕ್ಷಕನು ಉತ್ತರಗಳನ್ನು ಹೇಗೆ ತೆಗೆದುಕೊಳ್ಳಬೇಕು ಎಂಬುದನ್ನು ಕುರಿತು ಸಂಕ್ಷೇಪವಾಗಿ ವಿವೇಚಿಸುತ್ತೇವೆ.

೧ **ಮಕ್ಕಳು ಉತ್ತರಕೊಡದಿದ್ದರೆ ಅದರ ಕಾರಣವನ್ನು ಗೊತ್ತು ಹಚ್ಚಬೇಕು.** ಪ್ರಶ್ನೆಗಳಿಗೆ ಯಾವಾಗಲೂ ಉತ್ತರ ಸಿಗುವದೆಂದು ಹೇಳಲು ಬರುವದಿಲ್ಲ. ಪ್ರಶ್ನೆಯು ಕಠಿಣವಿದ್ದರೆ, ಅಸ್ಪಷ್ಟವಿದ್ದರೆ ಇಲ್ಲವೆ ಅದನ್ನು ಶಿಕ್ಷಕನು ಸಿಡುಕತನದಿಂದ ಕೇಳಿದರೆ, ಮಕ್ಕಳು ಅದಕ್ಕೆ ಉತ್ತರಕೊಡಲಿಕ್ಕಿಲ್ಲ. ಒಮ್ಮೊಮ್ಮೆ ಹುಡುಗರ ಅಜ್ಞಾನ, ಪುಕ್ಕತನ, ದುರಾಗ್ರಹ, ನಾಚಿಕೆ ಮುಂತಾದವುಗಳಿಂದ ಉತ್ತರವು ದೊರೆಯುವದಿಲ್ಲ. ಇಂಥ ಪ್ರಸಂಗಗಳಲ್ಲಿ ಶಿಕ್ಷಕನು ಉತ್ತರ ಬಾರದೇ ಇದ್ದುದರ ಮೂಲವನ್ನು ಗೊತ್ತುಹಚ್ಚಿ ಅದನ್ನು ಜಾಣತನದಿಂದಲೂ ಜಾಗರೂಕತೆಯಿಂದಲೂ ಹೋಗಲಾಡಿಸಬೇಕು.

೨ **ಮಕ್ಕಳ ಉತ್ತರಗಳನ್ನು ಪ್ರಶಂಸಾತ್ಮಕ ದೃಷ್ಟಿಯಿಂದ ನೋಡಬೇಕು.** ಪಾಠದ ಕಾರ್ಯವು ಸಾಂಗವಾಗಿ ನೆರವೇರ

ಬೇಕಾದರೆ ಮಕ್ಕಳ ಸಹಕಾರವು ಅತ್ಯಗತ್ಯ. ಈ ಸಹಕಾರವನ್ನು ಅವರು ಕೊಡುವ ಉತ್ತರ ರೂಪದಲ್ಲಿ ಶಿಕ್ಷಕನು ಪಡೆಯಬಹುದು. ಮಕ್ಕಳು ಉತ್ತರಕೊಡಲು ಬುದ್ಧಿಪೂರ್ವಕವಾಗಿ ಪ್ರಯತ್ನಿಸಬೇಕಾದರೆ ಶಿಕ್ಷಕನು ಅವರಿಗೆ ಆಗಾಗ್ಗೆ ಸಹಾನುಭೂತಿಪರವಾದ ಪ್ರೋತ್ಸಾಹವನ್ನು ಕೊಡಬೇಕಾಗುವದು. ಹಾಗೆ ಮಾಡುವದರಿಂದ ಹುಡುಗರಲ್ಲಿ ಧೈರ್ಯವೂ ಆತ್ಮವಿಶ್ವಾಸವೂ ಹೆಚ್ಚಾಗಿ, ಉತ್ತರಕೊಡಲು ಅವರು ಮನಃಪೂರ್ವಕವಾಗಿ ಪ್ರಯತ್ನಮಾಡುವರು. ಆದರೆ ಒಮ್ಮೊಮ್ಮೆ ಮಕ್ಕಳನ್ನು ಅನಿವಾರ್ಯವಾಗಿ ನಿರುತ್ಸಾಹಗೊಳಿಸುವ ಪ್ರಸಂಗಗಳು ಬರುವವು. ವರ್ಗದಲ್ಲಿ ಹಲವು ಬುದ್ಧಿವಂತ ಮಕ್ಕಳು ಎಲ್ಲ ಪ್ರಶ್ನೆಗಳಿಗೂ ತಾವೇ ಉತ್ತರ ಕೊಡಬೇಕೆಂದು ಆತುರಪಡುತ್ತಾರೆ. ಮತ್ತೆ ಕೆಲವರು ಹೇಳಿದ ಪ್ರಶ್ನೆಗೆ ಏನೂ ವಿಚಾರಮಾಡದೆ ಥಟ್ಟನೆ ಉತ್ತರ ಕೊಡುತ್ತಾರೆ. ಇಂಥ ವಿದ್ಯಾರ್ಥಿಗಳೊಂದಿಗೆ ಶಿಕ್ಷಕನು ಚಾತುರ್ಯದಿಂದಲೂ ಸಮಾಧಾನದಿಂದಲೂ ನಡೆದುಕೊಂಡು ಅವರ ಉತ್ಸಾಹ ಭಂಗಪಾಗದಂತೆ ಅವರನ್ನು ತಕ್ಕ ಮಾರ್ಗಕ್ಕೆ ಹಚ್ಚತಕ್ಕದ್ದು.

೩ **ತಪ್ಪು ಉತ್ತರಗಳನ್ನು ಮಕ್ಕಳ ಉತ್ಸಾಹ ಭಂಗವಾಗದಂತೆ ತಿದ್ದಬೇಕು.** ಮಕ್ಕಳ ಉತ್ತರಗಳು ತಪ್ಪಿರುವವೋ ಸರಿ ಇರುವವೋ ಎಂಬುದನ್ನು ಬೇಗ ಕಂಡುಕೊಂಡು ಅವುಗಳನ್ನು ತತ್ಕಾಲಕ್ಕೆ ತಿದ್ದಬೇಕಾಗುವದು. ಉತ್ತರವು ಅಲ್ಪಪ್ರಮಾಣದಲ್ಲಿದ್ದರೆ ಶಿಕ್ಷಕನು ಅದನ್ನು ನಿರಾಕರಿಸದೆ ಬೇರೆ ಪ್ರಶ್ನೆಗಳನ್ನು ಹಾಕಿ ಸರಿಪಡಿಸಬಹುದು. ಆ ಮೇಲೆ ಸರಿಯಾದ ಉತ್ತರವನ್ನು ಪುನಃ ಹೇಳಿಸಬೇಕು. ಶಿಕ್ಷಕನು ಚತುರನಿದ್ದರೆ ತಪ್ಪಿದ್ದ ಕೇವಲ ಅಲ್ಪ ಉತ್ತರವನ್ನೂ ಪ್ರಯೋಜನಕ್ಕೆ ಬರುವಂತೆ ಮಾಡಬಲ್ಲನು. ಉತ್ತರವು ಸಂಪೂರ್ಣವಾಗಿ ತಪ್ಪಿದ್ದರೆ ಅದರ ಕಾರಣವನ್ನು ಗೊತ್ತು ಹಚ್ಚಬೇಕು. ಈ ಕೆಲಸದಲ್ಲಿ ಸಿಟ್ಟು ನಿರರ್ಥಕ. ಅದರಿಂದ ಹಾನಿ ಮಾತ್ರ ತಟ್ಟುವದು. ವಿದ್ಯಾರ್ಥಿಯ ವಿಚಾರದಲ್ಲಿ ಯಾವ ದೋಷವಿದೆಯೆಂಬುದನ್ನು ಬೇರೆ ಪ್ರಶ್ನೆಗಳ ಮೂಲಕ ತಿಳಿದುಕೊಂಡು ಬಳಿಕ ಅದನ್ನು ಸರಿಪಡಿಸುವದು ಒಳ್ಳೆ

ಯದು. ಆದರೆ ಹುಡುಗರು ಕೇವಲ ಊಹೆಯಿಂದ ಇಲ್ಲವೆ ಏನೂ ವಿಚಾರಮಾಡದೆ ಥಟ್ಟನೆ ಹೇಳಿದ ತಪ್ಪು ಉತ್ತರಗಳನ್ನು ಶಿಕ್ಷಕನು ನಿರಾಕರಿಸಬಹುದು.

೪ **ಒಮ್ಮೊಮ್ಮೆ ಉತ್ತರದಲ್ಲಿದ್ದ ದೋಷಗಳನ್ನು ವರ್ಗದ ಮಕ್ಕಳಿಂದಲೇ ತಿದ್ದಿಸಬೇಕು.** ಕೇಳಿದ ಪ್ರಶ್ನೆಗೆ ಉತ್ತರ ಕೊಡುವಾಗ ಯಾವನೊಬ್ಬ ಬಾಲಕನು ಏನಾದರೂ ತಪ್ಪು ಮಾಡಿದರೆ ಆ ತಪ್ಪನ್ನು ಶಿಕ್ಷಕನೇ ತಿದ್ದದೆ ಮತ್ತೊಬ್ಬ ವಿದ್ಯಾರ್ಥಿಯಿಂದ ತಿದ್ದಿಸುವದು ಒಳ್ಳೆಯದು. ಇದರಿಂದ ವರ್ಗದ ಬಾಲಕರಲ್ಲಿ ವಿಮರ್ಶಾತ್ಮಕ ಬುದ್ಧಿಯು ಬಲಪಡುವದು. ಆದರೆ ಯಾವಾಗಲೂ ಹಾಗೆ ಮಾಡುವದು ಸರಿಯಲ್ಲ. ಏಕೆಂದರೆ, ತಮ್ಮ ತಪ್ಪನ್ನು ಶಿಕ್ಷಕನ ಬದಲಾಗಿ ವರ್ಗದ ಬೇರೊಬ್ಬ ವಿದ್ಯಾರ್ಥಿಯು ತಿದ್ದಿದರೆ, ಎಷ್ಟೋ ಕೋಮಲ ಸ್ವಭಾವದ ಮಕ್ಕಳು ಮನಸ್ಸಿಗೆ ಹಚ್ಚಿಕೊಳ್ಳುತ್ತಾರೆ.

೫ **ಉತ್ತರವು ಶುದ್ಧವಾದ ಭಾಷೆಯಲ್ಲಿರಬೇಕು ಮತ್ತು ಸಾಮಾನ್ಯವಾಗಿ ಪೂರ್ಣವಾಕ್ಯದ ರೂಪದಲ್ಲಿರಬೇಕು.** ಮಕ್ಕಳು ವ್ಯಾಕರಣ ದೃಷ್ಟಿಯಿಂದ ಶುದ್ಧವಾದ ಭಾಷೆಯಲ್ಲಿ ಉತ್ತರಗಳನ್ನು ಕೊಡುವಂತೆ ಮಾಡುವದು ಕೇವಲ ಭಾಷಾ ಶಿಕ್ಷಕನ ಕೆಲಸ, ಇನ್ನುಳಿದ ಶಿಕ್ಷಕರ ಕೆಲಸವಲ್ಲ ಎಂದು ಅನೇಕ ಶಿಕ್ಷಕರು ಹೇಳುವದುಂಟು. ಆದರೆ ಶುದ್ಧವಾಗಿ ಮಾತನಾಡುವದು ರೂಢಿಯಿಂದ ಬರತಕ್ಕ ಸಂಗತಿಯಾದುದರಿಂದ ಮಕ್ಕಳು ಯಾವಾಗಲೂ ಶುದ್ಧವಾದ ಭಾಷೆಯಲ್ಲಿಯೇ ಮಾತನಾಡುವಂತೆ ಅವರನ್ನು ಒತ್ತಾಯಪಡಿಸಬೇಕಾಗುವದು. ಈ ಮಾತನ್ನು ಎಲ್ಲ ಶಿಕ್ಷಕರು ಲಕ್ಷದಲ್ಲಿಡತಕ್ಕದ್ದು. ಇನ್ನು ಉತ್ತರವನ್ನು ಪೂರ್ಣ ವಾಕ್ಯದಲ್ಲಿಯೇ ಹೇಳಿಸಬೇಕೋ ಹೇಳಿಸಬಾರದೋ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯಗಳುಂಟು. ಸಾಮಾನ್ಯವಾಗಿ ಹೇಳುವದಾದರೆ ಕೆಳಗಿನ ವರ್ಗಗಳಲ್ಲಿಯಾದರೂ ಮಕ್ಕಳು ಪೂರ್ಣ ವಾಕ್ಯಗಳಲ್ಲಿ ಉತ್ತರ ಹೇಳುವದು ವಿಹಿತ.

**೬ ಸಾಮಾನ್ಯವಾಗಿ ಉತ್ತರಗಳನ್ನು ಪುನಃಪುನಃ ಉಚ್ಚರಿಸಬಾರದು.** ಉತ್ತರವು ಪ್ರಶ್ನೆಯಷ್ಟೇ ಮಹತ್ತ್ವದ್ದಿರುವದರಿಂದ ಶಿಕ್ಷಕನಾಗಲಿ ವಿದ್ಯಾರ್ಥಿಯಾಗಲಿ ಮಾತನಾಡುತ್ತಿರುವಾಗ ವರ್ಗದ ಎಲ್ಲ ಹುಡುಗರು ಅದನ್ನು ಲಕ್ಷಪೂರ್ವಕವಾಗಿ ಕೇಳತಕ್ಕದ್ದು. ಮಕ್ಕಳ ಉತ್ತರಗಳನ್ನು ಪುನಃಪುನಃ ಉಚ್ಚರಿಸುವ ಪರಿಪಾಠವನ್ನಿಟ್ಟರೆ ವರ್ಗದ ವಿದ್ಯಾರ್ಥಿಯು ಕೊಡುವ ಉತ್ತರದ ಕಡೆಗೆ ಮಕ್ಕಳು ಲಕ್ಷವನ್ನೇ ಪೂರೈಸುವದಿಲ್ಲ. ಆದುದರಿಂದ ಪ್ರತಿಯೊಂದು ಪ್ರಶ್ನೆಯ ಉತ್ತರವನ್ನು ಶಿಕ್ಷಕನು ತಿರುಗಿ ನುಡಿಯಬಾರದು. ಮಹತ್ತ್ವದ ಉತ್ತರಗಳನ್ನು ಮಾತ್ರ ಒಮ್ಮೊಮ್ಮೆ ತಿರುಗಿ ಹೇಳಬಹುದು. ಆದರೆ ಇಂಥವುಗಳನ್ನು ಸಾಧ್ಯವಿದ್ದಷ್ಟು ಹುಡುಗರಿಂದಲೇ ನುಡಿಸುವದು ಒಳ್ಳೆಯದು.

# ೧೩ ವಿಷಯಾನುಬಂಧ

ವಿಶ್ವದ ಬಗ್ಗೆ ಒಂದು ಬಹುಮುಖ್ಯವಾದ ಸಂಗತಿಯನ್ನು ಹೇಳಬೇಕಾದರೆ ಹೀಗೆ ಹೇಳಬಹುದು: ವಿಶ್ವದ ವಿವಿಧತೆಯಲ್ಲಿ ಒಂದು ಏಕತೆ ಪೋಣಿಸಿಕೊಂಡಿದೆ. ಶಿಕ್ಷಣ ಪ್ರಪಂಚಕ್ಕೆ ಈ ಸೂತ್ರವು ವಿಶೇಷವಾಗಿ ಅನ್ವಯಿಸುತ್ತದೆ. ಶಿಕ್ಷಣದಲ್ಲಿ ಸೇರಿಕೊಂಡ ವಿಷಯಗಳು ಅನೇಕವಾದರೂ ಶಿಕ್ಷಣವು ಒಟ್ಟಿನಲ್ಲಿ ಒಂದು ಘಟ್ಟಿ. ಮನುಷ್ಯನಿಗೆ ಪ್ರಪಂಚದಲ್ಲಿ ಆಗುವ ಅನುಭವಗಳೇನೋ ಅನೇಕ; ಆದರೆ ಅನುಭವಗಳ ಸಾರವಾದ ಜ್ಞಾನವು ಒಂದು ಘಟ್ಟಿ; ಒಂದು ಅಖಂಡವಾದ ನಿಧಿ. ಹುಟ್ಟಿದಂದಿನಿಂದ ಮಗುವಿಗೂ ಮಗುವಿನ ಸುತ್ತುಮುತ್ತಲಿನ ಪ್ರಪಂಚಕ್ಕೂ ಒಂದು ಸೂಕ್ಷ್ಮವಾದ ವ್ಯಾಪಾರ ನಡೆದು ಅದರ ಪರಿಣಾಮವಾಗಿ ಮಗುವಿನ ಜ್ಞಾನವು ಒಂದು ಸ್ವರೂಪವನ್ನು ಪಡೆಯುತ್ತ ಹೋಗುವದು. ಜ್ಞಾನವು ಬೆಳೆಯುವ ಕ್ರಮವನ್ನು ಒಂದು ಡೆಲ್ಟಾ ಪ್ರದೇಶವು ಸಿದ್ಧವಾಗುವ ಕ್ರಮಕ್ಕೆ ಹೋಲಿಸಬಹುದು. ಒಂದು ನದಿಯ ಪ್ರವಾಹದ ಗುಂಟ ಬೇರೆ ಬೇರೆ ಕಡೆಗಳಿಂದ ಬೇರೆ ಬೇರೆ ಗುಣಧರ್ಮಗಳಿಂದ ಕೂಡಿದ ಮಣ್ಣು ಹರಿದು ಬಂದು ಥರದ ಮೇಲೆ ಥರವಾಗಿ ಬಿದ್ದು ಒಂದು ಡೆಲ್ಟಾ ಪ್ರದೇಶವು ರೂಪುಗೊಳ್ಳುತ್ತದೆ. ಅದೇ ರೀತಿ ಪ್ರಪಂಚದಲ್ಲಿಯ ಬೇರೆ ಬೇರೆ ವಿಷಯಗಳ ಬೇರೆ ಬೇರೆ ಅನುಭವಗಳು ಥರದ ಮೇಲೆ ಥರವಾಗಿ ಸಂಗ್ರಹವಾಗಿ ಜ್ಞಾನವು ಒಂದು ಸ್ವರೂಪವನ್ನು ಪಡೆಯುತ್ತದೆ. ಜ್ಞಾನವು ಸಂಗ್ರಹವಾಗುವ ಈ ರೀತಿಯನ್ನು ನಾವು ನೆನಪಿನಲ್ಲಿಟ್ಟರೆ ಶಾಲೆಯಲ್ಲಿ ಮಕ್ಕಳಿಗೆ ಜ್ಞಾನವನ್ನು ಮಾಡಿಕೊಡಬೇಕಾದ ಪದ್ಧತಿಯ ವಿಷಯದಲ್ಲಿ ಅದು ನಮಗೆ ದಾರಿಯನ್ನು ತೋರಿಸದಿರದು.

ಆದರೆ ನಮ್ಮ ಶಾಲೆಯಲ್ಲಿ ಮಕ್ಕಳಿಗೆ ಜ್ಞಾನವನ್ನು ಮಾಡಿಕೊಡುವ ಸಾಮಾನ್ಯ ಪದ್ಧತಿಯು ಜ್ಞಾನದ ಅಖಂಡತೆಯನ್ನು ಅನುಲಕ್ಷಿಸಿ ಸಾಗುವದು ವಿರಳ; ಜ್ಞಾನದ ಪ್ರತ್ಯೇಕ ಪ್ರತ್ಯೇಕವಾದ ವಿಷಯ

ಗಳ ವಿವಿಧತೆಯನ್ನು ಲಕ್ಷಿಸಿ ನಡೆಯುವದೇ ಬಹಳ. ಭಾಷಾಜ್ಞಾನ ಬೇರೆ, ಸಂಖ್ಯಾಜ್ಞಾನ ಬೇರೆ, ಇತಿಹಾಸಜ್ಞಾನ ಬೇರೆ, ಭೂಗೋಲ ಜ್ಞಾನ ಬೇರೆ, ವಿಜ್ಞಾನ ಬೇರೆ, ಸಾಹಿತ್ಯ ಬೇರೆ,—ಇವುಗಳ ಪರಸ್ಪರ ಸಂಬಂಧವಿಲ್ಲವೆನ್ನುವ ರೀತಿಯಲ್ಲಿ ಸಾಮಾನ್ಯವಾಗಿ ಶಾಲೆಯಲ್ಲಿ ಶಿಕ್ಷಣದ ಏರ್ಪಾಡು ಆಗಿರುವದುಂಟು. ಹೀಗೆ ವಿಷಯಗಳನ್ನು ತೀರ ಪ್ರತ್ಯೇಕಿಸಿ ಕಲಿಸುವದರಿಂದ ಒಂದು ವಿಷಯದ ಜ್ಞಾನವು ಇನ್ನೊಂದು ವಿಷಯದ ಮೇಲೆ ಬೆಳಕು ಬೀರುವದಕ್ಕೆ ಅವಕಾಶವೇ ದೊರೆಯುವದಿಲ್ಲ. ಇದರ ಪರಿಣಾಮವಾಗಿ ಮಕ್ಕಳಿಗೆ ತಿಳಿಯಬೇಕಾದ ಸಂಗತಿಗಳು ಸಾಕಷ್ಟು ಸ್ಪಷ್ಟವಾಗಿ ತಿಳಿಯುವದಿಲ್ಲ; ಒಂದು ವಿಷಯವು ಇನ್ನೊಂದು ವಿಷಯವನ್ನು ಗ್ರಹಿಸಲಿಕ್ಕೆ ಸಹಾಯಕವಾಗುವದಿಲ್ಲ. ಪರಿಸ್ಥಿತಿ ಹೀಗಿರುವಾಗ ಮಕ್ಕಳ ಶಿಕ್ಷಣವು ತ್ವರೆಯಿಂದ ಸಾಗದಿದ್ದರೆ ಆಶ್ಚರ್ಯವೇನು?

ಆದರೆ ಜ್ಞಾನದ ಅಖಂಡತೆಯನ್ನು ಗಣನೆಗೆ ತಂದುಕೊಂಡ ಹೊಸ ಶಿಕ್ಷಣದಲ್ಲಿ ಅಭ್ಯಾಸದ ವಿಷಯಗಳನ್ನು ಪರಸ್ಪರ ಸಂಬಂಧೀಕರಿಸಿ ಕಲಿಸುವ ಪದ್ಧತಿಯು ಹೆಚ್ಚು ಗಣ್ಯತೆಯನ್ನು ಪಡೆದಿದೆ. ಈ ಪದ್ಧತಿಗೆ **ವಿಷಯಾನುಬಂಧ** ಎಂದು ಹೇಳುತ್ತಾರೆ. ವಿಷಯಾನುಬಂಧದಿಂದ ಒಂದು ವಿಷಯದ ಜ್ಞಾನವು ಇನ್ನೊಂದು ವಿಷಯದ ಸಹಾಯಕ್ಕೆ ಬಂದು ವಿಷಯಜ್ಞಾನವು ಸ್ಪಷ್ಟವಾಗುವದು; ಜ್ಞಾನಾಭಿವೃದ್ಧಿಗೆ ಪ್ರಚೋದನೆ ದೊರೆಯುವದು.

ಈ ಪ್ರಕಾರ ಅಭ್ಯಾಸ ವಿಷಯಗಳನ್ನು ಹೊಂದಿಸಿ ಕಲಿಸುವ ಎರಡು ಪದ್ಧತಿಗಳು ಪ್ರತಿಪಾದಿಸಲ್ಪಟ್ಟಿವೆ. ವಿಶೇಷ ಸಂಬಂಧ ಬರುವ ವಿಷಯಗಳನ್ನು ಸಮಯೋಚಿತವಾಗಿ ಸಂಬಂಧೀಕರಿಸಿ ಕಲಿಸುವದು ಒಂದು. ಈ ವಿಧಾನಕ್ಕೆ ವಿಷಯಾನುಬಂಧ ಎಂದು ಈ ಮೊದಲೇ ಹೇಳಿದೆ. ಅಭ್ಯಾಸದ ಎಲ್ಲ ವಿಷಯಗಳನ್ನು ಯಾವುದೇ ಒಂದು ಮುಖ್ಯವಾದ ವಿಷಯದ ಮುಖಾಂತರ ಕಲಿಸುವ ಪದ್ಧತಿಯು ಎರಡನೆಯದು. ಈ ಪದ್ಧತಿಯ ಮೇರೆಗೆ ಎಲ್ಲ ವಿಷಯಗಳೂ ಒಂದೇ ಒಂದು ವಿಷಯದಲ್ಲಿ

ಕೇಂದ್ರಿಕರಿಸಲ್ಪಡುವದರಿಂದ ಇದಕ್ಕೆ **ವಿಷಯಕೇಂದ್ರೀಕರಣ** ಎಂಬ ಹೆಸರನ್ನು ಕೊಡಬಹುದು.

೧ **ವಿಷಯಾನುಬಂಧ :—** ಇತಿಹಾಸವನ್ನೂ ಭೂಗೋಲವನ್ನೂ, ಅದರಂತೆ ಭಾಷಾವಿಷಯವನ್ನೂ ಇತಿಹಾಸವನ್ನೂ, ಶಾಸ್ತ್ರೀಯ ವಿಷಯವನ್ನೂ ಗಣಿತವನ್ನೂ ಅನುಬಂಧಿಸಿ ಕಲಿಸಬಹುದಾಗಿದೆ. ಕೈ ಕೆಲಸವನ್ನೂ ಡ್ರಾಯಿಂಗವನ್ನೂ ಬಹುಶಃ ಎಲ್ಲ ವಿಷಯಗಳೊಡನೆ ಅನುಬಂಧಿಸಿ ಕಲಿಸಲಿಕ್ಕೆ ಬರುವಂತಿದೆ. ಇತಿಹಾಸದ ಪಾಠಗಳಲ್ಲಿ ಕೆಲವನ್ನಾದರೂ ಕಥೆಗಳ ರೂಪದಲ್ಲಿ ಕಲಿಸಬಹುದಲ್ಲವೇ? ಹಾಗೆ ಕಲಿಸಿದರೆ ಇತಿಹಾಸವನ್ನೂ ಭಾಷಾವಿಷಯವನ್ನೂ ಅನುಬಂಧಿಸಿದಂತೆಯೇ ಸರಿ. ಅದರಂತೆಯೇ ಭಾಷೆಯನ್ನು ಕಲಿಸುವಾಗ ಭಾಷಾವಿಷಯಕ್ಕೆ ಯೋಗ್ಯವಾದ ಒಂದು ಇತಿಹಾಸ ಪಾಠವನ್ನು ಆಯ್ದುಕೊಂಡು ಕಲಿಸಬಹುದು. ಹಾಗೆಯೇ ಇತಿಹಾಸ ಕಲಿಸುವಾಗ ಶಿಕ್ಷಕರು ಮಕ್ಕಳ ಭೌಗೋಲಿಕ ಜ್ಞಾನವನ್ನು ಉಪಯೋಗಮಾಡಿಕೊಳ್ಳುವದು ಶಿಕ್ಷಕರಾದವರಿಗೆಲ್ಲ ಗೊತ್ತಿರಲಿಕ್ಕೆ ಸಾಕು. ಇತಿಹಾಸಪಾಠದಲ್ಲಿ ಉಪಯೋಗಿಸುವ ಗ್ಲೋಬು, ನಕಾಶ, ಚಿತ್ರಗಳು ಭೌಗೋಲಿಕ ಉಪಕರಣಗಳೇ ಸರಿ.

೨ **ವಿಷಯಕೇಂದ್ರೀಕರಣ :—** ಅನುಬಂಧವನ್ನು **ಅತಿರೇಕಕ್ಕೆ** ಒಯ್ದರೆ ಅದೇ ಕೇಂದ್ರೀಕರಣವಾಗುತ್ತದೆ. ಅಭ್ಯಾಸದ ಎಲ್ಲ ವಿಷಯಗಳನ್ನು ಒಂದೇ ಒಂದು ಕೇಂದ್ರ ವಿಷಯದ ಮೂಲಕ ಕಲಿಸಬೇಕೆಂಬುದೇ ಕೇಂದ್ರೀಕರಣದ ಮುಖ್ಯ ತತ್ತ್ವ. ಇತಿಹಾಸವನ್ನು ಕೇಂದ್ರ ವಿಷಯವನ್ನಾಗಿ ಇಟ್ಟುಕೊಂಡು ಅದರ ಮುಖಾಂತರ ಉಳಿದ ಎಲ್ಲ ವಿಷಯಗಳ ಜ್ಞಾನವನ್ನು ಮಾಡಿಕೊಡಬಹುದೆಂದು ಕೇಂದ್ರೀಕರಣವನ್ನು ಸಮರ್ಥಿಸುವ ಕೆಲವು ಶಿಕ್ಷಣತಜ್ಞರು ಪ್ರತಿಪಾದಿಸುತ್ತಾರೆ. **ವರ್ಧಾ ಶಿಕ್ಷಣ**ದಲ್ಲಿ ಈ ಕೇಂದ್ರೀಕರಣವು ಅಡಕವಾಗಿದೆ. ನೂಲುವ, ನೇಯುವ ಶಿಕ್ಷಣದ ಮೂಲಕ ಎಲ್ಲ ಅಭ್ಯಾಸ ವಿಷಯಗಳನ್ನು ಹೇಳಿಕೊಡಬಹುದೆಂದು ವರ್ಧಾಯೋಜನೆಯ ಕರ್ತರು ಅಭಿಪ್ರಾಯ ಪಟ್ಟಿದ್ದಾರೆ. ಎಷ್ಟರ

ಮಟ್ಟಿಗೆ ಇದು ಕಾರ್ಯತಃ ಯಶಸ್ವಿಯಾಗಬಹುದೋ ನೋಡಬೇಕು. ಕೇಂದ್ರೀಕರಣವು ಕಷ್ಟವಾಗಿದೆ; ಆದರೆ ಅನುಬಂಧವು ಸುಲಭಸಾಧ್ಯ. ಅನುಬಂಧವು ವ್ಯವಹಾರ್ಯವಾಗಿರುವದಲ್ಲದೆ ಪರಿಣಾಮಕಾರಕವೂ ಅಹುದು.

ವಿಷಯಾನುಬಂಧವನ್ನು ಕುರಿತು ಒಂದು ಎಚ್ಚರಿಕೆ ಅಗತ್ಯ. ಏಕೆಂದರೆ, ಅನುಬಂಧಿಸುವ ಭರದಲ್ಲಿ ಶಿಕ್ಷಕನು ಮುಖ್ಯ ವಿಷಯವನ್ನು ಮೂಲೆಗೊತ್ತಿ ಅಮುಖ್ಯವಾದುದನ್ನು ಮುಂದೆಮಾಡುವ ಸಂಭವವಿದೆ. ಅನುಬಂಧಿಸಲು ತೆಗೆದುಕೊಂಡ ವಿಷಯವು ಮುಖ್ಯ ವಿಷಯಕ್ಕೆ ಪೋಷಕವಾಗಿರಬೇಕೇ ಹೊರತು ಅದರ ಪ್ರಗತಿಗೆ ಆತಂಕವಾಗಿ ನಿಲ್ಲಬಾರದು. ಉದಾಹರಣೆಗಾಗಿ, ಇತಿಹಾಸವನ್ನು ಕಲಿಸುವಾಗ ಮಕ್ಕಳ ಭಾಷೆಯ ಕಡೆಗೆ ಲಕ್ಷಕೊಡಬೇಕೆಂಬ ವಿಷಯಾನುಬಂಧದ ತತ್ತ್ವವನ್ನು ಮನ್ನಿಸಿ ಶಿಕ್ಷಕನು ಇತಿಹಾಸ ಪಾಠವನ್ನು ಭಾಷಾವಿಷಯದ ಪಾಠವನ್ನಾಗಿ ಮಾಡುವಷ್ಟು ದೀರ್ಘಕ್ಕೆ ಹೋಗಬಾರದು. ಯಾವ ಕಾಲಕ್ಕೆ ಯಾವ ವಿಷಯಕ್ಕೆ ಎಷ್ಟು ಮಹತ್ತ್ವವನ್ನು ಕೊಡಬೇಕೆಂಬ ತಾರತಮ್ಯವನ್ನು ಶಿಕ್ಷಕನಾದವನು ಬಲ್ಲವನಾಗಿರಬೇಕು. ಇಲ್ಲವಾದರೆ ವಿಷಯಾನುಬಂಧವು ಹುಚ್ಚುಕೆಲಸವಾಗಿ ಪರಿಣಮಿಸುವ ಸಂಭವವಿದೆ.

# ೧೪ ಪಾಠದ ವಿಮರ್ಶೆ

ಕಲಿಸುವ ಕಲೆಯನ್ನು ಕೈವಶಮಾಡಿಕೊಳ್ಳಲು ಶಿಕ್ಷಕನು ಅನೇಕ ವಿಧವಾಗಿ ಪ್ರಯತ್ನಿಸಬೇಕಾಗುತ್ತದೆ. ಈ ವಿಷಯದಲ್ಲಿ ಎರಡನೆಯವರ ಪಾಠಗಳನ್ನು ನಿರೀಕ್ಷಿಸುವದು ಬಹಳ ಸಹಾಯವಾಗುವದು. ಪಾಠ ನಿರೀಕ್ಷಣೆಯಿಂದ ಶಿಕ್ಷಕರು ಸಾಮಾನ್ಯವಾಗಿ ಮಾಡಬಹುದಾದ ತಪ್ಪು ತಡೆಗಳು ಸಹಜವಾಗಿ ಗೊತ್ತಾಗುವವು. ಶಿಕ್ಷಕನು ಕೇವಲ ಪಾಠ ನಿರೀಕ್ಷಣೆ ಮಾಡಿದರೆ ಮಾತ್ರ ಸಾಲದು. ಅವನು ತಾನು ನಿರೀಕ್ಷಿಸಿದ ಪಾಠದ ವಿಷಯು, ಅದನ್ನು ಕಲಿಸಿದ ಕ್ರಮು, ಮತ್ತು ಅದರಲ್ಲಿ ಉಪಯೋಗಿಸಿದ ಉಪಕರಣ ಇವೆಲ್ಲವುಗಳ ಯೋಗ್ಯಾಯೋಗ್ಯತೆಯನ್ನು ಇತರ ಶಿಕ್ಷಕರೊಡನೆ ಚರ್ಚಿಸಬೇಕಾಗುವದು. ಅದರಿಂದ ಪಾಠದ ಫಲಿತಾಂಶವು ಸ್ಪಷ್ಟವಾಗಿ ತಿಳಿದು, ಪಾಠದ ಯಶಸ್ಸಿಗೆ ಕಾರಣವಾದ ಸಂಗತಿಗಳನ್ನು ಅನುಕರಣಮಾಡಲಿಕ್ಕೂ ಅದರ ವಿಫಲತೆಗೆ ಕಾರಣವಾದ ದೋಷಗಳನ್ನು ದೂರೀಕರಿಸಲಿಕ್ಕೂ ಅನುಕೂಲವಾಗುವದು. ಆದುದರಿಂದ ಪಾಠ ನಿರೀಕ್ಷಣೆಯು ಕಲಿಸುವ ಕೌಶಲ್ಯವನ್ನು ಹೆಚ್ಚಿಸಲು ಅತ್ಯುತ್ತಮ ಸಾಧನವೆಂದೇ ಹೇಳಬಹುದು.

ಸರಿಯಾದ ಪಾಠ ವಿಮರ್ಶೆಯಲ್ಲಿ ಮುಖ್ಯವಾಗಿ ಮೂರು ಗುಣಗಳು ಇರತಕ್ಕದ್ದು:— ೧ ನ್ಯಾಯಶೀಲತೆ, ೨ ಸಂಪೂರ್ಣತೆ, ಮತ್ತು ೩ ಸಫಲತೆ. ಅವುಗಳನ್ನು ಇಲ್ಲಿ ಸಂಕ್ಷೇಪವಾಗಿ ವಿವೇಚಿಸಿದೆ.

**೧ ನ್ಯಾಯಶೀಲತೆ:—** ಪಾಠದ ವಿಮರ್ಶೆಯೆಂದರೆ ಪಾಠದಲ್ಲಿ ಕಂಡುಬಂದ ಲೋಪದೋಷಗಳನ್ನು ಮಾತ್ರ ಆರಿಸಿ ತೆಗೆಯುವದು ಎಂದು ಹೇಳುವದು ವಾಡಿಕೆಯಾಗಿದೆ. ಇಂಥ ವಿಮರ್ಶೆಯು ಸರಿಯಾದುದಲ್ಲವೆಂದು ಬೇರೆ ಹೇಳಬೇಕಿಲ. ಯಾಕಂದರೆ ಪಾಠದ ಉತಮ

ಗುಣಗಳನ್ನು ಆರಿಸಿ ತೆಗೆಯುವದು ಅದರ ದೋಷಗಳನ್ನು ತೆಗೆಯುವಷ್ಟೇ ಮಹತ್ತ್ವವಾದದ್ದು. ಯಥಾರ್ಥವಾದ ವಿಮರ್ಶೆಯು ಗುಣದೋಷ ಗಳೆರಡನ್ನೂ ತೋರಿಸಬೇಕು. ಒಮ್ಮೊಮ್ಮೆ ಶಿಕ್ಷಕರು ವ್ಯಕ್ತಿಯ ಮೇಲಿನ ಪ್ರೀತಿಯಿಂದ ಇಲ್ಲವೆ ದ್ವೇಷದಿಂದ ಪಕ್ಷಪಾತಮಾಡುವದುಂಟು. ಹಾಗೆ ಮಾಡುವದು ಸರಿಯಲ್ಲ. ನ್ಯಾಯ ಶೀಲತೆಯು ಉತ್ತಮ ವಿಮರ್ಶಕನ ಲಕ್ಷಣವೆಂಬುದನ್ನು ಅವರು ನೆನಪಿನಲ್ಲಿಡತಕ್ಕದ್ದು.

೨ **ಸಂಪೂರ್ಣತೆ:—** ಪಾಠದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಕೊಡುವದು ಮಾತ್ರ ಪಾಠದ ವಿಮರ್ಶೆಯೆಂದು ಮತ್ತೆ ಕೆಲವರು ತಿಳಿಯುತ್ತಾರೆ. ಪಾಠದ ಗುಣದೋಷಗಳನ್ನು ಕುರಿತು ಕೇವಲ ವೈಯಕ್ತಿಕ ಅಭಿಪ್ರಾಯಗಳನ್ನು ಕೊಟ್ಟರೆ ವಿಮರ್ಶೆಯ ಕಾರ್ಯವು ಮುಗಿದಂತಾಗುವದಿಲ್ಲ. ಆ ಗುಣದೋಷಗಳ ಕಾರಣಗಳನ್ನು ಕಂಡು ಹಿಡಿಯಬೇಕು ಮತ್ತು ಅವುಗಳಿಂದ ಬಿಡುಗಡೆ ಪಡೆಯಲು ಉಪಾಯಗಳನ್ನು ಸೂಚಿಸಬೇಕು. ಅಂದರೆ ಮಾತ್ರ ವಿಮರ್ಶೆಯು ಸಂಪೂರ್ಣವಾಗುವದು. ಸಂಪೂರ್ಣ ವಿಮರ್ಶೆಯಿಂದ ಪಾಠದಲ್ಲಿ ತೋರಿಬಂದ ಗುಣದೋಷಗಳಿಗೆ ಶಿಕ್ಷಕನು ಎಷ್ಟರ ಮಟ್ಟಿಗೆ ಹೊಣೆಗಾರನಿರುವನೆಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ.

೩ **ಸಫಲತೆ:—** ಯಾವದೊಂದು ಪಾಠವನ್ನು ವಿಮರ್ಶಿಸುವಾಗ ಪಾಠದ ಆದರ್ಶಕ್ರಮವನ್ನು ಮನಸ್ಸಿನಲ್ಲಿ ನಿರ್ಧರಿಸಿಕೊಂಡು ಬಳಿಕ ಪಾಠಕೊಟ್ಟ ಶಿಕ್ಷಕರಿಗೆ ಯೋಗ್ಯವಾದ ಸಲಹೆ ಸೂಚನೆಗಳನ್ನು ಕೊಡಬೇಕು. ಅಂದರೆ ಮಾತ್ರ ಪಾಠದ ವಿಮರ್ಶೆಯು ಸಫಲವಾಗುವದು.

ಪಾಠವನ್ನು ನಿರೀಕ್ಷಿಸುವಾಗ ಶಿಕ್ಷಕನು ಯಾವಯಾವ ಸಂಗತಿಗಳ ಕಡೆಗೆ ಲಕ್ಷಕೊಡಬೇಕೆಂಬುದನ್ನು ಕೆಳಗೆ ಸಂಕ್ಷಿಪ್ತವಾಗಿ ವಿವರಿಸಿದೆ.

**೧ ಪಾಠದ ಉದ್ದೇಶ:—**

೧ ಉದ್ದೇಶವು ನಿರ್ದಿಷ್ಟವಾಗಿದ್ದಿತೆ?

೨ ಅದು ಬಾಲಕರಿಗೆ ತಿಳಿಯುವಂತೆ ಹೇಳಲ್ಪಟ್ಟಿತೆ?

೩ ಅದು ಬಾಲಕರ ಯೋಗ್ಯತೆಗೆ ಹಾಗು ಪಾಠದ ವಿಷಯಕ್ಕೆ ಸರಿಯಾಗಿದ್ದಿತೆ?

೪ ಪಾಠವು ಉದ್ದೇಶಕ್ಕನುಸಾರವಾಗಿ ಸಾಗಿತೆ? (ಶಿಕ್ಷಕನು ಆ ಉದ್ದೇಶವನ್ನು ಮುಂದಿಟ್ಟುಕೊಂಡು ಸಾಗಿದನೆ?)

೨ ಉಪೋದ್ಘಾತ:—

೧ ಉಪೋದ್ಘಾತವು ಬಹಳ ದೀರ್ಘ (ಉದ್ದ) ವಾಗಿತ್ತೆ? ಅಥವಾ ತೀರ ಚಿಕ್ಕದಾಗಿತ್ತೆ?

೨ ಅದು ವಿಷಯದಲ್ಲಿ ಉತ್ಸುಕತೆಯನ್ನು ಹುಟ್ಟಿಸುವಂತಹದಿತ್ತೆ?

೩ ಅದು ಬಾಲಕರನ್ನು ಹೊಸ ಕೆಲಸಕ್ಕೆ ಸಿದ್ಧಗೊಳಿಸಿತೆ?

೪ ಕೊನೆಯಲ್ಲಿ ಉದ್ದೇಶಕಥನವು ಸ್ಪಷ್ಟವಾಗಿದ್ದಿತೆ?

೩ ವಿಷಯ:—

೧ ವಿವರಣೆಗಾಗಿ ತೆಗೆದುಕೊಂಡ ವಿಷಯಕ್ಕೂ ಉದ್ದೇಶಕ್ಕೂ ತಾಳಮೇಳವಿದ್ದಿತೆ?

೨ ವಿಷಯವು ನಿರ್ದಿಷ್ಟವಾದುದಿದ್ದಿತೆ?

೩ ಅದು ಪೂರ್ಣ ಸರಿಯಾದುದಿದ್ದಿತೆ? ಸಾಕಷ್ಟಿದ್ದಿತೆ? ಹೆಚ್ಚಾಗಿದ್ದಿತೆ?

೪ ಅದು ವರ್ಗಕ್ಕೆ ಅನುಗುಣವಾದುದಿದ್ದಿತೆ?

೫ ಅದು ಗೊತ್ತುಪಡಿಸಿದ ವೇಳೆಯಲ್ಲಿ ಮುಗಿಯುವಂತಿದ್ದಿತೆ?

೬ ಅದು ಕ್ರಮಬದ್ಧವಾಗಿದ್ದಿತೆ?

೪ ಕ್ರಮ:—

೧ ಪದ್ಧತಿಯು ಬಾಲಕರ ಜ್ಞಾನ, ವಿಚಾರ, ವಿಷಯಗ್ರಹಣ ಇವುಗಳನ್ನು ಹೆಚ್ಚಿಸಿತೆ?

೨ ಬಾಲಕರನ್ನು ಯತ್ನಮಾಡಲಿಕ್ಕೆ ತೊಡಗಿಸಿತೆ?

೩ ಪಾಠವು ಬಾಲಕರನ್ನು ಉತ್ಸಾಹಗೊಳಿಸಿತೆ? ಇಲ್ಲವಾದರೆ, ಏಕೆ ಉತ್ಸಾಹಗೊಳಿಸಲಿಲ್ಲ? ಶಿಕ್ಷಕನ ಕಲಿಸುವಿಕೆಯು ಚನ್ನಾಗಿರಲಿಲ್ಲವೆ? ವಿಷಯವು ಕಠಿಣವಾಗಿದ್ದಿತೆ? ವಾತಾ

ವರಣವು ಅನುಕೂಲವಾಗಿರಲಿಲ್ಲವೆ? ಎಂದರೆ, ಶಕೆ, ದಣಿವು, ಮೊದಲಾದವುಗಳು ಅಡ್ಡಬಂದವೆ?

೪ ಬಾಲಕರಿಗೆ ಪಾಠದಲ್ಲಿ ಆಸಕ್ತಿಯುಂಟಾಯಿತೆ? ಇಲ್ಲವಾದರೆ, ಏಕೆ ಆಗಲಿಲ್ಲ?

೫ ಅರ್ಥವಿವರಣೆ ಮತ್ತು ಉದಾಹರಣೆಗಳು ತಿಳಿಯುವಂತಹವು, ಸಂಕ್ಷಿಪ್ತವಾದವುಗಳು ಮತ್ತು ಪ್ರೋತ್ಸಾಹಗೊಳಿಸುವಂತಹವು ಆಗಿದ್ದುವೆ?

೬ ಚಿತ್ರ, ಆಕೃತಿ, ನಕಾಶ ಮೊದಲಾದ ಉಪಕರಣಗಳು ಸರಿಯಾಗಿ ಉಪಯೋಗಿಸಲ್ಪಟ್ಟವೆಯೆ? ಅವು ಎಲ್ಲರಿಗೂ ಕಾಣಿಸುವಂತೆ ಯೋಗ್ಯ ಸ್ಥಳದಲ್ಲಿ ಇಡಲ್ಪಟ್ಟದ್ದವೆ?

೭ ವಿವರಣೆಯ ವಿಷಯುವನ್ನು ಶಿಕ್ಷಕನು ತಾನೇ ಹೇಳಿದನೆ? ಅಥವಾ ಮಕ್ಕಳೊಡನೆ ವಿವೇಚಿಸಿದನೆ? ಅನವಶ್ಯಕವಾಗಿ ಹೇಳಿದುದನ್ನೇ ಮೇಲಿಂದ ಮೇಲೆ ಹೇಳಿದನೆ? ಇಲ್ಲವೆ ತಕ್ಕ ಉದಾಹರಣೆಗಳಿಂದ ಸ್ಪಷ್ಟೀಕರಿಸುತ್ತ ಸಾಗಿದನೆ?

೮ ವಿವೇಚಿಸಿದ ವಿಷಯದ ಉಪಯೋಗಗಳು ಬಾಲಕರಿಂದ ಹೊರಡಿಸಲ್ಪಟ್ಟವೆಯೆ? ಅಥವಾ ಶಿಕ್ಷಕನು ತಾನಾಗಿಯೇ ಹೇಳಿ ಬಿಟ್ಟನೆ? ಅಭ್ಯಸನವು ವ್ಯವಹಾರದ ಸಂಗತಿಗಳಿಗೆ ಸಂಬಂಧಿಸಿದ್ದಿತೆ?

೯ ಸಾರಾಂಶವು ಕ್ರಮವಾಗಿ ಹೊರಡಿಸಲ್ಪಟ್ಟಿತೆ?

೧೦ ಬಾಲಕರು ಜ್ಞಾನದ ಹಂಬಲವನ್ನು ಹುಟ್ಟಿಸಿಕೊಂಡು ವರ್ಗವನ್ನು ಬಿಟ್ಟರೆ?

**೫ ಕರಿಹಲಿಗೆ:—**

೧ ಕಪ್ಪು ಹಲಿಗೆಯು ತಕ್ಕ ಸ್ಥಳದಲ್ಲಿದ್ದಿತೆ?

೨ ಅದು ಸಾಕಷ್ಟು ಉಪಯೋಗಿಸಲ್ಪಟ್ಟಿತೆ? ಅನವಶ್ಯಕವಾಗಿ ಉಪಯೋಗಿಸಲ್ಪಟ್ಟಿತೆ?

೩ ಕರಿಹಲಿಗೆಯ ಬರೆಹವು ಒಂದು ಕ್ರಮದಿಂದ ಸಾಗಿತೆ?
೪ ಅದು ಸುಲಭವಾಗಿ ಓದಲಿಕ್ಕೆ ಬರುವಂತಹದಿತ್ತೆ?
೫ ಕೇವಲ ಶಿಕ್ಷಕನೇ ಕರಿಹಲಿಗೆಯ ಮೇಲೆ ಬರೆದನೆ? ಬಾಲಕರೂ ಸಹಕರಿಸಿದರೆ?
೬ ಶಿಕ್ಷಕನು ಕರಿಹಲಿಗೆಯನ್ನು ಉಪಯೋಗಿಸುತ್ತಿದ್ದಾಗ ಬಾಲಕರು ಯೋಗ್ಯ ಕೆಲಸದಲ್ಲಿ ತೊಡಗಿದ್ದರೆ?

೬ ಪ್ರಶ್ನೆಗಳು :—

೧ ಪ್ರಶ್ನೆಗಳು ತಿಳಿಯುವಂತಹವೂ, ನಿಶ್ಚಿತ (ಒಂದೇ) ಉತ್ತರವನ್ನು ಹೊರಡಿಸುವಂತಹವೂ, ಸಂಕ್ಷಿಪ್ತವಾದವೂ ಇದ್ದುವೆ?
೨ ಪ್ರಶ್ನೆಗಳು ಬಾಲಕರ ವಿಚಾರವನ್ನು ಕೆಣಕುವಂತಹವಿದ್ದುವೆ?
೩ ಅವು ಬಹಳ ಸುಲಭವಾಗಿದ್ದುವೆ? ಉತ್ತರವನ್ನು ಸೂಚಿಸುವಂತಹವಿದ್ದುವೆ?
೪ ಅವೇ ಪ್ರಶ್ನಗಳು ಪುನಃ ಪುನಃ ಕೇಳಲ್ಪಟ್ಟವೆಯೆ?
೫ ಹೌದು ಅಥವಾ ಅಲ್ಲ—ಇಷ್ಟೇ ಉತ್ತರ ಬರುವಂತಹವಿದ್ದುವೆ?
೬ ಪ್ರಶ್ನೆಗಳು ಪರಸ್ಪರ ಸಂಬಂಧವುಳ್ಳವಿದ್ದುವೆ? ಪ್ರಶ್ನೆಗಳನ್ನು ಕೇಳುವದರಲ್ಲಿ ಒಂದು ಕ್ರಮವಿದ್ದಿತೆ?
೭ ವರ್ಗದ ಎಲ್ಲ ಹುಡುಗರಿಗೂ ಪ್ರಶ್ನೆಗಳು ಕೇಳಲ್ಪಟ್ಟವೆಯೆ?
೮ ಉತ್ತರಗಳನ್ನು ಸ್ವೀಕರಿಸಿ ಶಿಕ್ಷಕನು ಅವುಗಳನ್ನು ಅನವಶ್ಯಕವಾಗಿ ತಿರುತಿರುಗಿ ಉಚ್ಚರಿಸಿದನೆ?
೯ ಅಪೂರ್ಣ ಹಾಗು ಅಸ್ಪಷ್ಟ ಉತ್ತರಗಳ ಬಗ್ಗೆ ಲಕ್ಷ ಕೊಟ್ಟನೆ? ತಪ್ಪು ಉತ್ತರಗಳನ್ನು ತಾನೇ ತಿದ್ದಿದನೆ? ಮಕ್ಕಳಿಂದ ತಿದ್ದಿಸಿದನೆ?
೧೦ ವಿದ್ಯಾರ್ಥಿಗಳು ಕುತೂಹಲಪಟ್ಟು ಪ್ರತಿ ಪ್ರಶ್ನೆ ಮಾಡಿದರೆ?

೭ ಶಿಕ್ಷಕ :—

೧ ಶಿಕ್ಷಕನ ನಡೆನುಡಿಗಳು ಆಕರ್ಷಕವಾಗಿದ್ದುವೆ? ಅವನಲ್ಲಿ ಸಹಾನುಭೂತಿ ಮತ್ತು ಆನಂದವೃತ್ತಿ ಕಂಡುಬಂದುವೆ?

೨ ವಾತಾವರಣವು ಬಾಲಕರಲ್ಲಿ ಉಲ್ಲಾಸವನ್ನು ಹುಟ್ಟಿಸುವಂತಹದಿತ್ತೆ ?

೩ ವರ್ಗವು ಹಿಡಿತದಲ್ಲಿದ್ದಿತೆ? ಶಿಕ್ಷಕನು ಬಾಲಕರ ಸೋಮಾರಿತನವನ್ನು ಕಂಡುಹಿಡಿದು ಅದನ್ನು ಹೋಗಲಾಡಿಸಲು ತಕ್ಕ ಉಪಾಯವನ್ನು ಕೈಕೊಂಡನೆ?

೪ ಶಿಕ್ಷಕನಲ್ಲಿ ಸಾಕಷ್ಟು ಉತ್ಸಾಹವಿದ್ದಿತೆ? ಪ್ರಸಂಗಕ್ಕನುಸಾರವಾಗಿ ಪಾಠವನ್ನು ಸರಿಪಡಿಸಿಕೊಂಡು ಕಲಿಸಿದನೆ?

೫ ಶಿಕ್ಷಕನ ಭಾಷೆ ಪರಿಶುದ್ಧವಾಗಿದ್ದಿತೆ? ಉಚ್ಚಾರವು ಸ್ಪಷ್ಟವಾಗಿದ್ದಿತೆ ?

೬ ಶಿಕ್ಷಕನ ಧ್ವನಿಯು ಸ್ಪಷ್ಟವಾಗಿ ಕೇಳುವಂತಹದಿದ್ದಿತೆ? ಅವನು ಅನಾವಶ್ಯಕವಾಗಿ ಒದರಿ ಮಾತಾಡಿದನೆ? ಅಥವಾ ಅವನು ಇಳಿದನಿಯಲ್ಲಿ ಮಾತಾಡಿದನೆ ? ಧ್ವನಿಯು ಮಧುರವೂ ಭಾವವನ್ನು ವ್ಯಕ್ತಪಡಿಸುವಂತಹದೂ ಆಗಿದ್ದಿತೆ?

೭ ಪಂಜರದೊಳಗಿನ ಸಿಂಹದಂತೆ ಶಿಕ್ಷಕನು ಅತ್ತಿತ್ತ ಅಲೆದಾಡುತ್ತಿದ್ದನೆ? ಅಥವಾ ವರ್ಗದ ಮಧ್ಯ ( ಯೋಗ್ಯ ) ಸ್ಥಾನದಲ್ಲಿ ಮಕ್ಕಳೆದುರಿನಲ್ಲಿ ನಿಂತು ಕಲಿಸಿದನೆ?

೮ ಖಡುವನ್ನು ತಿರುಗಿಸುವುದು, ಬೆರಳುಗಳನ್ನು ಸರಿದಾಡಿಸುವುದು, ಅಂಗಿಯ ಚುಂಗನ್ನು ಜಗ್ಗುವುದು, ಕೋಟಿನ ಗುಂಡಿಯನ್ನು ಹಾಕುವುದು, ತೆಗೆಯುವುದು, ತಲೆ ತುರಿಸುವುದು, ಹಣೆ ಕೆರೆಯುವುದು, ಟೊಂಕದ ಮೇಲೆ ಕೈಯಿಡುವುದು, ಮುಂದೆ ಬಾಗುವುದು ಮೊದಲಾದ ಚಟಗಳಿದ್ದುವೆ?

೯ ಶಿಕ್ಷಕನಲ್ಲಿ ಧೈರ್ಯ, ಸ್ಥೈರ್ಯ ಮತ್ತು ಗಾಂಭೀರ್ಯ ಒಡೆದು ಕಂಡವೆ ?

೧೦ ಶಿಕ್ಷಕನು ಅವಸರದಿಂದ ಪಾಠ ಸಾಗಿಸಿದನೆ? ಇಲ್ಲವೆ ಸಾವಕಾಶವಾಗಿ ಸಾಗಿಸಿದನೆ? ಪಾಠದ ಗತಿಯು ಸರಿಯಾಗಿದ್ದಿತೆ?

೧೧ ಶಿಕ್ಷಕನ ಹಾವಭಾವ ಉಡಿಗೆತೊಡಿಗೆಗಳು ಸ್ವಾಭಾವಿಕವೂ ದರ್ಜೆಗೆ ಒಪ್ಪುವಂತಹವೂ ಆಗಿದ್ದುವೆ?

೧೨ ಶಿಕ್ಷಕನ ವೃತ್ತಿಯು ಸ್ವಾಭಾವಿಕವಾದುದೂ ಮನಮೆಚ್ಚಿಸುವಂತಹದೂ ಆಗಿದ್ದಿತೆ?

೮ ಪಾಠದ ಗುಣ:—

| | | |
|---|---|---|
| ಅ+ | ಬ+ | ಕ+ |
| ಅ | ಬ | ಕ |
| ಅ- | ಬ- | ಕ- |

---

'ಬ' ಎಂದರೆ ಒಟ್ಟು ಗುಣಗಳ ಅರ್ಧವೆಂದು ತಿಳಿಯಬಹುದು.

# ಕೆಲವು ಅಭಿಪ್ರಾಯಗಳು



## ಶ್ರೀ. ಬಿ. ಡಿ. ಥಿಟೆ, ಬಿ. ಎ., ಎಸ್. ಟಿ. ಸಿ. ಡಿ.,

## ರಿಟಾಯರ್ಡ ಅಸಿಸ್ಟೆಂಟ್ ಎಜ್ಯುಕೇಶನಲ್ ಇನ್‌ಸ್ಪೆಕ್ಟರ್, ಧಾರವಾಡ.

ಆಂಗ್ಲ ಭಾಷೆಯಲ್ಲಿ ಶಿಕ್ಷಣ ವಿಷಯಕ್ಕೆ ಅನೇಕ ಗ್ರಂಥಗಳಿವೆ.– ಉದ್ಗ್ರಂಥ ಗಳಿವೆ. ಆದರೆ ಕನ್ನಡದಲ್ಲಿ ಈ ವಿಷಯದ ಗ್ರಂಥಗಳು ಅತಿ ವಿರಳ, ಇದ್ದ ಒಂದೆರಡು ಗ್ರಂಥಗಳಾದರೂ ಶಿಕ್ಷಣಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳನ್ನೊಳ ಗೊಂಡಿರುವುದಿಲ್ಲ. ಆದುದರಿಂದ ಟ್ರೇನಿಂಗ ಕಾಲೇಜುಗಳಲ್ಲಿ ಶಿಕ್ಷಣ ಹೊಂದುತ್ತ ಲಿರುವ ಪ್ರಾಥಮಿಕ ಶಿಕ್ಷಕರಿಗೆ ಅನೇಕ ಅನಾನುಕೂಲತೆಗಳೂ ತೊಂದರೆಗಳೂ ಉಂಟಾಗುತ್ತಿರುವದು ಸಹಜವು. ಇದನ್ನನುಲಕ್ಷಿಸಿ ಶಿಕ್ಷಣಾಂಗಗಳನ್ನೆಲ್ಲ ಸಾಕಷ್ಟು ಸಂಪೂರ್ಣವಾಗಿ ವಿವೇಚಿಸುವ ಗ್ರಂಥಮಾಲೆಯೊಂದನ್ನು ರಚಿಸುವ ಮಹತ್ಕಾರ್ಯ ವನ್ನು ಹೊಸ ಶಿಕ್ಷಣ ಮಾಲೆಯ ಸಂಪಾದಕರು ಮತ್ತು ನನ್ನ ತರುಣ ಮಿತ್ರರಾದ ಶ್ರೀಯುತರಾದ ತಂಬದ, ಹಂದ್ರಾಳ, ಕರ್ಕಿ ಇವರು ಕೈಕೊಂಡದ್ದು ಸ್ತುತ್ಯವೂ ಅಭಿನಂದನೀಯವೂ ಆಗಿದೆ.

ಕಾಲ–ಮಾನ–ಪರಿಸ್ಥಿತಿಗಳಿಗನುಸರಿಸಿ ಶಿಕ್ಷಣದ ಪದ್ಧತಿ, ಕ್ರಮ ಇವುಗಳಲ್ಲಿ ಹೆಚ್ಚುಕಡಿಮೆಯಾಗುವದುಂಟು;— ಆದರೆ ಮೂಲ ತತ್ತ್ವಗಳಲ್ಲಿ ಮಾತ್ರ ಅಷ್ಟೊಂದು ವ್ಯತ್ಯಾಸವಾಗಲಾರದು. ಆದುದರಿಂದ ಹಿಂದೆ ಆಗಿ ಹೋದ ಶಿಕ್ಷಣ ತಜ್ಞರ ವಿಚಾರಗಳು ಈಗಿನ ಕಾಲದ ಶಿಕ್ಷಕರಿಗೂ ಬೋಧಪ್ರದವಾಗದಿರವು. ನನ್ನ ಈ ಮೂವರು ತರುಣ ಮಿತ್ರರು ಬರೆದ " ಶಿಕ್ಷಣವೂ ಕಲಿಸುವ ಕ್ರಮವೂ " ಎಂಬ ಈ ಗ್ರಂಥವು ಹಿಂದಿನ ಹಾಗು ಇಂದಿನ ಪಾಶ್ಚಾತ್ಯ ಗ್ರಂಥಕರ್ತರು ಪ್ರತಿ ಪಾದಿಸಿದ ತತ್ತ್ವ–ಪದ್ಧತಿ–ಕ್ರಮಗಳ ಆಧಾರದಿಂದಲೇ ಬರೆದುದಾಗಿದೆ. ಇದರಲ್ಲಿ ಸೇರಿದ ವಿಷಯಗಳೆಲ್ಲ ಕ್ರಮಬದ್ಧವಾಗಿವೆ. ವಿಷಯ ವಿವೇಚನೆಯು ಸರಸವೂ ಸಾಕಷ್ಟು ಸಂಪೂರ್ಣವೂ ಆಗಿದೆ. ಶೈಲಿ ಸುಲಭವಾಗಿದೆ; ಸುಗಮವಾಗಿದೆ. ಒಟ್ಟಾರೆ, ಈ ಗ್ರಂಥವು ವಾಚನೀಯವೂ ಸಂಗ್ರಾಹ್ಯವೂ ಬೋಧಪ್ರದವೂ ಆಗು ವಂತೆ ರಚಿತವಾಗಿದೆ. ಶಿಕ್ಷಕರೂ ಶಿಕ್ಷಣ ಪ್ರೇಮಿಗಳೂ ಇದನ್ನು ಸಂಗ್ರಹಿಸಿ ತರುಣ ರಾದ ಗ್ರಂಥಕರ್ತರಿಗೆ ಉತ್ತೇಜನವನ್ನೀಯುವರೆಂದು ನಾನು ನೆರೆನಂಬಿದ್ದೇನೆ.

ಪ್ರಸ್ತುತ ಲೇಖಕರ ಪರಿಚಯವು ನನಗೆ ತುಂಬಾ ಇದೆ. ಇವರೆಲ್ಲರೂ ಪದವೀಧರರು; ಶಿಕ್ಷಕರಿಗೆ ಅಗತ್ಯವಿರುವ ಟ್ರೇನಿಂಗ ಪಡೆದವರು; ಕರ್ತವ್ಯ ದಕ್ಷರು. ಶ್ರೀ. ತಂಬದವರಂತೂ ನನಗೆ ತೀರ ಪರಿಚಿತರು. ಇವರು ನನ್ನೊಂದಿಗೆ ವಿಜಾಪೂರ ಹಾಯಸ್ಕೂಲಿನಲ್ಲಿ ಕೆಲಸಮಾಡಿರುವರಲ್ಲದೆ ಕಾರವಾರ ಹಾಯಸ್ಕೂಲಿನಲ್ಲಿಯೂ ನನ್ನ ಕೈಕೆಳಗೆ ದುಡಿದವರಾಗಿರುತ್ತಾರೆ. ಇವರು ಶಿಕ್ಷಣ ಖಾತೆಯಲ್ಲಿ ಹೆಜ್ಜೆಯನ್ನಿಟ್ಟಂದಿನಿಂದ ಒಳ್ಳೇ ಉತ್ಸಾಹದಿಂದಲೂ ಹುರುಪಿನಿಂದಲೂ ಕೆಲಸ ಮಾಡುತ್ತಲಿದ್ದಾರೆ. ನಾವಿಬ್ಬರೂ ಎಷ್ಟೋ ಸಾರೆ ಶಿಕ್ಷಣ ವಿಷಯವಾಗಿ ಮಾತಾಡುವಾಗ ಶಿಕ್ಷಣ ವಿಷಯದಲ್ಲಿ ಇವರಿಗಿರುವ ಆಸಕ್ತಿಯನ್ನು ನಾನು ಕಂಡು ಆನಂದಪಟ್ಟಿದ್ದೇನೆ, ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಏನಾದರೂ ಹೆಚ್ಚಿನ ಕಾರ್ಯವನ್ನು ಮಾಡಲು ಆಗಾಗ್ಗೆ ಪ್ರೋತ್ಸಾಹಿಸಿದ್ದೇನೆ. ಈಗ ಇವರು ತಮ್ಮ ಮಿತ್ರರ ಸಹಕಾರದಿಂದ ಶಿಕ್ಷಣ ಮಾಲೆಯೊಂದನ್ನು ಬರೆಯಲು ಉಪಕ್ರಮಿಸಿದುದನ್ನು ನೋಡಿ ನನಗೆ ಅಭಿಮಾನವೆನಿಸಿದೆ.

ಶಿಕ್ಷಣ ಮಾಲೆಯ ಈ ಪ್ರಥಮ ಗ್ರಂಥವು ಶಿಕ್ಷಣ ಕ್ಷೇತ್ರದಲ್ಲಿ ದುಡಿಯುವವರಿಗೆಲ್ಲ ಬಹು ದೊಡ್ಡ ಲಾಭವಾಗುವದೆಂದು ನನ್ನ ನಂಬಿಗೆ. ಇದಕ್ಕಾಗಿ ಕನ್ನಡಿಗರೆಲ್ಲರೂ ಈ ತರುಣ ಲೇಖಕರನ್ನು ಪ್ರೋತ್ಸಾಹಿಸುವರೆಂದು ನಾನು ಮನಃಪೂರ್ವಕವಾಗಿ ಹಾರೈಸುತ್ತೇನೆ.

**ಡಾಕ್ಟರ್ ವ್ಹಿ. ವ್ಹಿ. ಕಾಮತ,** ಬಿ. ಎ., ಎಸ್. ಟಿ. ಸಿ. ಡಿ.,
ಡಿಪ್. ಇಡಿ. ( ಎಡಿನ್‌ಬರೊ ), ಪಿ. ಎಚ್‌ಡಿ. ( ಎಡಿನ್‌ಬರೊ ),
**ಪ್ರಾಯೋಗಿಕ ಮನಃಶಾಸ್ತ್ರದ ಪ್ರೊಫೆಸರ್ ಅವರು**
ಎಸ್. ಟಿ. ಕಾಲೇಜ, ಬೆಳಗಾವಿ.

ಶ್ರೀಮಾನ್ ಬಿ. ಎಸ್. ಹಂಚಿನಾಳ, ಬಿ. ಎ., ಬಿ. ಟಿ. ಇವರ ಸಂಪಾದಕತ್ವದಲ್ಲಿ ಪ್ರಕಟವಾದ "ಶಿಕ್ಷಣವೂ ಕಲಿಸುವ ಕ್ರಮವೂ" ಎಂಬ ಪುಸ್ತಕದ ಕೆಲವು ಪ್ರಕರಣಗಳನ್ನು ಓದಿ ನೋಡಿದೆನು. ಇದನ್ನು ಬರೆದ ಲೇಖಕರು ಆಧುನಿಕ ಶಿಕ್ಷಣ ತಜ್ಞರ ತತ್ತ್ವಗಳನ್ನು ತಿಳಿದುಕೊಂಡು ಅವುಗಳನ್ನು ಅನುಲಕ್ಷಿಸಿ ಈ ಪುಸ್ತಕವನ್ನು ಸುವ್ಯವಸ್ಥಿತ ರೀತಿಯಿಂದ ಬರೆದಂತೆ ತೋರುತ್ತದೆ. ಈ ವಿಷಯುವನ್ನು ಕುರಿತು ಇಷ್ಟೊಂದು ಮೇಲ್ತರದ ಪದ್ಧತಿಯಿಂದ ರಚಿತವಾದ ಬೇರೆ ಪುಸ್ತಕಗಳು ಉತ್ತರ ಕರ್ನಾಟಕದಲ್ಲಿ ಕನ್ನಡ ಭಾಷೆಯಲ್ಲಿ ಇದ್ದಂತೆ ನನಗೆ ತೋರಿಬರುವುದಿಲ್ಲ. ಪುಸ್ತಕದೊಳಗಿನ ವಿಷಯಗಳೂ ವಿಷಯ ವಿವೇಚನೆಯೂ ಪ್ರಾಥಮಿಕ ಶಿಕ್ಷಕರ ಟ್ರೇನಿಂಗ ಕಾಲೇಜುಗಳ ವಿದ್ಯಾರ್ಥಿಗಳ ಅಭ್ಯಾಸಪತ್ರಿಕೆಯನ್ನು ಸಾಧ್ಯವಿದ್ದಷ್ಟು ಅನುಸರಿಸಿ

ಸಾಗಿವೆ. ಆದುದರಿಂದ ಈ ಪುಸ್ತಕವು ಮೇಲೆ ಕಾಣಿಸಿದ ವಿದ್ಯಾರ್ಥಿಗಳಿಗೆ ವಿಶೇಷ ವಾಗಿ ಉಪಯೋಗವಾಗುವುದರಲ್ಲಿ ಸಂದೇಹವಿಲ್ಲ. ಹಾಗು ಪುಸ್ತಕದ ಸರಣಿಯು, ಶೈಲಿಯು, ಸುಲಭವೂ ಸುಗಮವೂ ಆಗಿರುವುದರಿಂದ ಪ್ರಾಥಮಿಕ ಶಿಕ್ಷಣದಲ್ಲಿ ಆಸಕ್ತಿಯುಳ್ಳ ಇತರರಿಗೂ ಈ ಪುಸ್ತಕವು ನೆರವಾಗಬಹುದಾಗಿದೆ. ಪುಸ್ತಕವು ಅಚ್ಚುಕಟ್ಟಾಗಿ ಮುದ್ರಿತವಾಗಿದೆ. ಪುಸ್ತಕದ ಕೊನೆಯಲ್ಲಿ ಪಾರಿಭಾಷಿಕ ಶಬ್ದಗಳ ಪಟ್ಟಿಯೊಂದನ್ನು ಸೇರಿಸಬೇಕೆಂದು ನಾನು ಸೂಚಿಸುತ್ತೇನೆ. ವಿಶೇಷ ಉತ್ಸಾಹವುಳ್ಳ ಶಿಕ್ಷಕರ ಅವಗಾಹನೆಗಾಗಿ ಹಿಂದುಸ್ತಾನದಲ್ಲಿ ಶಿಕ್ಷಣ ವಿಷಯದ ಬಗ್ಗೆ ರಚಿತವಾದ ಒಳ್ಳೆಯ ಗ್ರಂಥಗಳ ಒಂದು ಪಟ್ಟಿಯನ್ನೂ ಕೊಡಬಹುದು. ಈ ಗ್ರಂಥವನ್ನು ರಚಿಸಿದ ಮೂವರು ಲೇಖಕರ ಲೇಖನ ಕೌಶಲ್ಯವು ಇದರಲ್ಲಿ ಚನ್ನಾಗಿ ಒಡಮೂಡಿದೆ. ಶಿಕ್ಷಣದ ವಿಷಯದಲ್ಲಿ ಆಸಕ್ತಿಯುಳ್ಳ ಎಲ್ಲ ಕನ್ನಡಿಗರೂ ಇದನ್ನು ಆದರದಿಂದ ಸ್ವಾಗತಿಸಲಿ ಎಂದು ನಾನು ಹಾರೈಸುತ್ತೇನೆ.

### ಶ್ರೀ. ಎಂ. ಆರ್. ಸಾಖರೆ, ಎಂ. ಎ., ಟಿ. ಡಿ. ( ಕ್ಯಾಂಟಬ್ ),
### ಶಿಕ್ಷಣ ಮತ್ತು ಸಂಸ್ಕೃತ ಭಾಷೆಯ ಪ್ರೊಫೆಸರ್ ಅವರು
### ಲಿಂಗರಾಜ ಕಾಲೇಜ, ಬೆಳಗಾವಿ.

....ಈ ಮಾಲೆಯ ರಚನೆ ಕ್ರಮಬದ್ಧವಾಗಿದೆ. ಹೊಸ ಶಿಕ್ಷಣದ ಎಲ್ಲ ಅಂಶಗಳೂ ಇದರಲ್ಲಿ ಹೂಗಳಾಗಿ ಸೇರಿಕೊಂಡಿವೆ. ವಿಷಯಪ್ರತಿಪಾದನೆಯು ನೇರವಾಗಿ, ವಿಷಯದ ಮಹತ್ತ್ವವನ್ನರಿತು ಬರೆದುದಾಗಿದೆ. ಶಿಕ್ಷಣದಂತಹ ಕ್ಲಿಷ್ಟವಾದ ವಿಷಯವೂ ಕೂಡ ಸುಲಭಗ್ರಾಹ್ಯವಾಗುವಷ್ಟು ಭಾಷೆಯು ಸುಗಮವಾಗಿದೆ. ಶಿಕ್ಷಣ ವಿಷಯವನ್ನು ಸಂಕ್ಷಿಪ್ತವಾಗಿ ತಿಳಿಯಲಿಚ್ಛಿಸುವ ಕನ್ನಡಿಗರಿಗೆ, ಕನ್ನಡ ಪ್ರಾಥಮಿಕ ಶಾಲೆಗಳ ಶಿಕ್ಷಕರಿಗೆ ಇದು ಪ್ರಾರಂಭದ ಪುಸ್ತಕ ಮಾಲೆಯಾಗಬಲ್ಲದಲ್ಲದೆ ಕನ್ನಡ ಟ್ರೇನಿಂಗ ಕಾಲೇಜಿನ ಶಿಕ್ಷಕ-ವಿದ್ಯಾರ್ಥಿಗಳಿಗೆ ಪಠ್ಯ ಪುಸ್ತಕವಾಗಲು ಯೋಗ್ಯವಾಗಿದೆ. ಕನ್ನಡಿಗರು ಈ ಮಾಲೆಯನ್ನು ಪ್ರೇಮದಿಂದ ಬರಮಾಡಿಕೊಂಡು ಕನ್ನಡದಲ್ಲಿ ಶೈಕ್ಷಣಿಕ ಸಾಹಿತ್ಯವು ಹೆಚ್ಚು ಹೆಚ್ಚು ರಚಿತವಾಗುವಂತೆ ಉತ್ತೇಜನವನ್ನೀಯಲಿ ಎಂದು ಬಯಸುತ್ತೇನೆ.

### ಶ್ರೀ. ಸಿ. ಎಸ್. ಬಾಗಿ, ಎಂ. ಎ., ಬಿ. ಟಿ.
### ಇಂಗ್ಲಿಷ್ ಭಾಷೆಯ ಪ್ರೊಫೆಸರ್ ಅವರು
### ಲಿಂಗರಾಜ ಕಾಲೇಜ, ಬೆಳಗಾವಿ.

ಶ್ರೀಮಾನ್ ಬಿ. ಎಸ್. ಹಂಚಿನಾಳ, ಬಿ. ಎ., ಬಿ. ಟಿ. ಅವರು

“ ಹೊಸ ಶಿಕ್ಷಣ ಮಾಲೆ ” ಯನ್ನು ಹೊರಡಿಸಿದ್ದು ತುಂಬಾ ಆನಂದದ ಸಂಗತಿ ಕನ್ನಡದಲ್ಲಿ ಶಿಕ್ಷಣ ಕಲೆಗೆ ಸಂಬಂಧಿಸಿದ ಸಾಹಿತ್ಯವು ಸಾಕಷ್ಟಿಲ್ಲ. ಈ ಕೊ ಯನ್ನು ಹೋಗಲಾಡಿಸುವ ಅವಶ್ಯಕತೆಗೆ ಕನ್ನಡ ಜನತೆಯೂ ಸಾಕಷ್ಟು ತ್ತಿಲ್ಲ. ಕಾರಣ ಎಲ್ಲರಿಗೂ ತಿಳಿಯುವ ಭಾಷೆಯಲ್ಲಿ, ಹೃದಯಂಗಮವಾಗಿ ವಿಷ ಪರಿಚಯವನ್ನು ಮಾಡಿಕೊಡುವದಕ್ಕಾಗಿ ಈ ಮಾಲೆ ಪ್ರಕಟವಾಗಿದೆ. ಲೇಖಕರೆಲ್ಲರು ಶಿಕ್ಷಣದ ಶಾಸ್ತ್ರ ಮತ್ತು ಕಲೆ ಇವೆರಡರಲ್ಲೂ ತಜ್ಞರು. ಬರೆದ ಲೇಖಗಳು ಸಾಮಾನ್ಯ ವಾಗಿ ಶಿಕ್ಷಣದ ಮುಖ್ಯಾಂಗಗಳನ್ನು ಒಳಗೊಂಡಿವೆ. ಕನ್ನಡದ ಪ್ರೇಮಿಗ ಆದರವನ್ನು ಈ ಪ್ರಕಟನೆಯ ಚಿತ್ತಾಕರ್ಷಕ ಗುಣಗಳು ಗಳಿಸದೆ ಇರಲಾರವು.

## **R. S. Madiman,** Esq. B. A., S. T. C. D.,

Head Master, Govt. High School, Bijapur.

This book, "Shikshanawoo Kalisuwa-Kramawoo", cove ing about 110 pages, the first of the Series, "Hosa Shikshar Male", intended for teachers under training in Kannad Training Institutions, has fulfilled to an appreciable extent the purpose intended, by giving herein a brief, simple and direct narration of the essentials of the elementary principle of the theory and practice of education. It may thus said to have fulfilled the long-felt want of a Kannada han text-book on education for Kannada Training Institutio Educational Psychology, School Organisation and Cla Management, Methods of Teaching several subjects individually and a few model notes of lessons, etc. are expected to be dealt with in the remaining books of the Series. So, as almos the first of its kind in the market and expected to be ver useful to teachers under training in kannada Training Institutions, I wish the Series every success and trust it will be soor very popular among the teachers under training as a text book.

## ಶ್ರೀ. ಸ. ಪ. ಗಾಂವಕರ, ಬಿ. ಎ.,

### ಎ. ಓ. ಮುನ್ಸಿಪಲ್ ಸ್ಕೂಲ್‌ಬೋರ್ಡ, ಹುಬ್ಬಳ್ಳಿ.

ಹೊಸ ಶಿಕ್ಷಣ ಮಾಲೆಯ ಪ್ರಥಮ ಪುಷ್ಪವಾದ "ಶಿಕ್ಷಣವೂ ಕಲಿಸುವ ಕ್ರಮವೂ" ಈ ಗ್ರಂಥವನ್ನು ಸಂಪೂರ್ಣ ಓದಿಸಿ ನೋಡಿದೆ. ಓದಿಸುತ್ತ ಓದಿಸುತ್ತ ಹೋದಹಾಗೆಲ್ಲ ಹೆಚ್ಚುಹೆಚ್ಚಾಗಿ ಸಂತೋಷವು ತಲೆದೋರಿತು. ನಾನು ಕೂಡ ಶಿಕ್ಷಕ ೆದೆ. ಸಂಗಡಲೇ ಸ್ವಾಂತನವು ಸಂಗಡಿಸಿತು. ಇಷ್ಟಕ್ಕೆಲ್ಲ ಕಾರಣಗಳು ಸಾಕಷ್ಟಿವೆ: ೊಸ ದೃಷ್ಟಿಯ ಹೊತ್ತಿಗೆ; ಹೊಸ ಬಗೆಯ ಹೊತ್ತಿಗೆ; ಸಲಕರಣೆಗಳನ್ನೆಲ್ಲ ಸರಿಯಾಗಿ ರ್ಪಡಿಸಿಕೊಂಡು ಸಮನ್ವಯಮಾಡಿದ, ಮುಂಬಯಿ ಕರ್ನಾಟಕದಲ್ಲಿ ಇಷ್ಟೊಂದು ಾಲ ಕಾಣದಿರುವ ಹೊತ್ತಿಗೆ; ಶಿಕ್ಷಕ ಶಿಕ್ಷಕಿಯರಾಗಲಿಚ್ಛಿಸುವ ಹಾಗು ಶಿಕ್ಷಣ ಕಾರ್ಯದಲ್ಲಿ ಕಾಲಿಟ್ಟ ಪ್ರತಿಯೊಬ್ಬನ ಕೈಯಲ್ಲಿಯೂ ಅವಶ್ಯಮೇವ ಇರಬೇಕಾದ ೊತ್ತಿಗೆ. ಇಂತಪ್ಪ ಹೊತ್ತಿಗೆಯು ಹೃದಯಕ್ಕೆ ಸಹಜವಾಗಿ ತಟ್ಟಿತು; ಮನಕ್ಕೆ ುಟ್ಟಿತು. ಅಂತೇ ನನಗಾದ ಸಂತೋಷ ಸಾಂತ್ವನಗಳು. ಶಿಕ್ಷಕ-ಶಿಕ್ಷಣಾಲಯ ್ಗೆ ಈ ಪುಸ್ತಕವನ್ನು ಪಠ್ಯ ಪುಸ್ತಕವನ್ನಾಗಿ ಮಾಡಬಹುದೆಂದು ನಾನೇನೋ ಬಗೆ ಯುವೆನು.

